




**BRAHMOTSAVAM AT NARAYANAVANAM FROM 24-4-'83 TO 1-5-'83.**







ಸೋಮಶೇಖರ ತಾನೆ ಬಲ್ಲ ಶ್ರೀ
ರಾಮನಾಮಾಮೃತದ ಸವಿಯನೆಲ್ಲ

ಮದನ ಪಿತಾಯೆಂದು ಕುಣಿ ಕುಣಿದಾಡಲು
ಕೆದರಿದ ಕೆಂಜಡೆಗಳ ಪುಂಜದಿ
ಒದಗಿದ ಗಂಗೆ ತುಂತುರು ಹನಿಗಳ ಕಂಡು
ಪದುಮಜಾಂಡಹಿತ ರಾಮ ರಾಮಾ ಎಂಬ ॥ ೧ ॥

ಆನಂದ ಜಲ ಸೋನೆಗೆ ಲಲಾಟ
ದಾನೇತ್ರ ಬಡ ಬಾನಲನಂತಿರೆ
ಏನೆನ್ನಲಿಬಹುದು ಸುಖ ಸಾಗರದೊಳು
ತಾನೆದ್ದು ಮುಳುಗುತ ರಾಮ ರಾಮಾ ಎಂಬ ॥ ೨ ॥

ಶಿರದ ಗಂಗೆಯು ವರ ಅಗ್ಗಣಿಯಾಗಿರೆ
ಸರಸಿಜ ಬಾಂಧವ ಚಂದಿರ ದೀಪ
ಉರಿಗಣ್ಣಿನ ಹೊಗೆ ಧೂಪವನೇರಿಸಿ
ಕರಣವೆ ನೈವೇದ್ಯಯೆಂದು ರಾಮ ಎಂಬ ॥ ೩ ॥

ಶ್ರೀ ವ್ಯಾಸರಾಯರು

ಸಂದರ್ಶಿಸಿ!

ಅನುಗ್ರಹೀತರಾಗಿರಿ!!

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ

## ತಿರುಪತಿ

### ವಾರ್ಷಿಕ ಬ್ರಹ್ಮೋತ್ಸವ ಕಾರ್ಯಕ್ರಮ

ದಿನಾಂಕ **18—5—83** ರಿಂದ **26—5—83** ವರೆಗೆ

| | | |
|---|---|---|
| 18—5—83 | ಬುಧವಾರ | ಬ್ರಹ್ಮೋತ್ಸವಾರಂಭ, ಧ್ವಜಾರೋಹಣ |
| 22—5—83 | ಭಾನುವಾರ | ಗರುಡೋತ್ಸವ |
| 25—5—83 | ಬುಧವಾರ | ರಥೋತ್ಸವ |
| 26--5—83 | ಗುರುವಾರ | ಚಕ್ರಸ್ನಾನ |

ಸೂಚನೆ:- ಶ್ರೀ ಗೋವಿಂದರಾಜಸ್ವಾಮಿ ದೇವಾಲಯ ತಿರುಪತಿ ಬಸ್ ನಿಲ್ದಾಣ, ರೈಲ್ವೆಸ್ಟೇಷನ್‌ಗಳ ಹತ್ತಿರವೇ ಇದೆ. ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿನಿತ್ಯ ವಿಶೇಷ ಕಾರ್ಯಕ್ರಮಗಳಿರುತ್ತವೆ.

ನೀವೂ ಬನ್ನಿ,

ನಿಮ್ಮವರನ್ನೂ ಕರೆತನ್ನಿ.

ತಿ. ತಿ. ದೇ.



ಸಂಪುಟ ೧೩]     ಏಪ್ರಿಲ್ ೧೯೮೩     [ಸಂಚಿಕೆ ೧೧

# ವಿಷಯಸೂಚಿ




ಗೌರವ ಸಂಪಾದಕರು:
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ:
ಕೆ ಸುಬ್ಬಾರಾವು, ಎಂ.ಎ.,

ಉಪಸಂಪಾದಕ:
ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ:
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

# ಸಂಪಾದಕೀಯ

ದುಂದುಭಿ ನಿಜವಾಗಿಯೂ ಹೆಸರನ್ನು ಸಾರ್ಥಕಗೊಳಿಸಿಕೊಂಡಿತು. ಈ ವರ್ಷದಲ್ಲಿ ನಡೆದ ಅನೇಕ ಸಂಘಟನೆಗಳು ಒಂದೊಂದೂ ಒಂದೊಂದು ನಾದವಾಗಿ ವಿನೂತನ ವ್ಯಾಖ್ಯಾನದಿಂದ ಕೇಳಿಬಂದಿತು. ಸಮಾಜದ ನೀರವತೆಯನ್ನು ಅಶಕ್ತತೆಯೆಂದು ಪರಿಗಣಿಸಬಾರದೆಂದೂ, ಸಾಮಾಜಿಕ ರಾಜಕೀಯ ವಿಜ್ಞಾನದಲ್ಲಿ ಅದೊಂದು ತಂತ್ರವೆಂದೂ, ತಾನು ಬಯಸಿದಾಗ ಪ್ರತಿಘಾತ ಮಾಡುವ ಶಕ್ತಿ ಸಾಮರ್ಥ್ಯಗಳು ಸಮಾಜದಲ್ಲಿ ನಿಗೂಢವಾಗಿ ಇವೆಯೆಂದೂ, ಸಮಯ ನೋಡಿ ಸವ್ಯಸಾಚಿತ್ವವನ್ನು ನೆರವೇರಿಸುವ 'ನರಶಕ್ತಿ' ಸಮಾಜದ್ದೆಂದೂ, ಈ ಭಾರತದಲ್ಲಿ ನರ ನಾರಾಯಣ ಸೇವೆ ಸಮಾನ ಗೌರವ ಭಾವನೆಗಳಿಂದ ನೆರವೇರಿಸಲ್ಪಡಬೇಕೆಂದೂ, ಆಗಲೇ ನರನು ನಾರಾಯಣನಾಗುವನೆಂದೂ, 'ನಾವು ಬೇರೆ – ಜನ ಬೇರೆ' ಎನ್ನುವವರು ಬೇರೆಯಾಗಿಯೇ ಇರಬೇಕಾಗಿ ಬರಬಹುದೆಂದೂ,–ಹೀಗೆ ಎಷ್ಟೋ ಅರ್ಥಗಳು ಅನಾದಿಯಾಗಿ ಕೇಳಿ ಬರುತ್ತಿದ್ದರೂ ಈ ವರ್ಷ ದುಂದುಭಿಯಾಗಿ ಮೊಳಗಿದವು. ಹೊಸ ಚಿಗುರು ಕೂಡಿದ ಹಳೆಯ ಬೇರು ಹೊಸ ಉಲ್ಲಾಸದಿಂದ ಕಂಡು ಬರುತ್ತಿದೆ. ಕಾಲಗತಿಗೆ ಹೆಚ್ಚು ಅನುಸಾರವಾಗಿ ನಡೆದ ಸಂಘಟನೆಗಳವು. ನಿತ್ಯ ನೂತನೆಯನ್ನು ಹುಡುಕುವ ಕಾಲದಲ್ಲಿ ನಿಲುಗಡೆ ಯಾವುದಕ್ಕೂ ಇರದು ಎಂಬುದೇ ದುಂದುಭಿಯ ನೂತನರಾಗ. ಹಳೆಯ ಹಾಡು ಹಿಂದಾಗಿ ಹೊಸರಾಗ ಹತ್ತಿರ ಹತ್ತಿರವಾಗುತ್ತಿದೆ.

ಒಬ್ಬ ಭಕ್ತನಿಗಾಗಿ ಸ್ವಾಮಿ ವೈಕುಂಠವನ್ನು ಬಿಟ್ಟು ಓಡಿ ಬಂದನೆಂದೂ, ಒಬ್ಬ ಭಕ್ತಳಿಗಾಗಿ ಎಂಜಲು ತಿಂದನೆಂದೂ, ಒಬ್ಬ ಅತ್ತೆಯ ಕೈಯಲ್ಲಿ ಬರೆ ಹಾಕಿಸಿ ಕೊಂಡನೆಂದೂ, ಒಬ್ಬ ಭಕ್ತಳು ಮುಡಿದು ಕೊಂಡ ಹೂವನ್ನು ಮುಗುಳ್ನಗೆಯಿಂದ ಸ್ವೀಕರಿಸಿದನೆಂದೂ, ಒಬ್ಬ ಭಕ್ತನಿಂದ ಒಬ್ಬ ಅಂತ್ಯಜನನ್ನು ಹೊರಿಸಿದನೆಂದೂ ದರ್ಶನಕ್ಕಾಗಿ ತಪ್ತನಾದ ಮತ್ತೊಬ್ಬ ಭಕ್ತನಿಗಾಗಿ ತನ್ನ ವಾಹನವನ್ನೇ ಬದಿಗೆ ಸರಿಸಿ ದರ್ಶನ ನೀಡಿದನೆಂದೂ, ನಮ್ಮ ಸಾಹಿತ್ಯವೆಲ್ಲ ಭಗವಂತನ ಭಕ್ತಪ್ರಾಣ ಪರಾಯಣತೆಯನ್ನು ವಿವರಿಸುತ್ತಿರುವಲ್ಲಿ, ನಾರಾಯಣ ಪ್ರಸಾದ ನರರೆಲ್ಲರಿಗೆ ಸೇರಬೇಕೆಂಬ ಒಂದು ಆಲೋಚನೆ ಹುಟ್ಟಿದಲ್ಲಿ ಅಸಹಜವೇನಲ್ಲ.

ಈಗ ರುಧಿರೋದ್ಗಾರಿ ಬರುತ್ತಿದೆ, ಅರ್ಥವನ್ನು ಕಲ್ಪಿಸಿಕೊಂಡರೂ ಭಯಂಕರ. ವಸ್ತುಸ್ಥಿತಿಯಲ್ಲಿ ಭಯಪಡಬೇಕಾಗಿಲ್ಲವೇನೋ. ಅಧಿಕಾರ, ವರ್ಗ, ವರ್ಣ, ಧರ್ಮ, ಭಾಷಾವ್ಯತ್ಯಾಸಗಳಿಂದ ನಮ್ಮನ್ನು ನಾವೇ ಹಿಂಸೆಗೊಳಗಾಗಿಸಿ ಕೊಳ್ಳುವುದರಿಂದ ಈ ಸಮಾಜದಲ್ಲಿ ರುಧಿರೋದ್ಗಾರಿ ಬಹುಕಾಲದಿಂದ ನಡೆದು ಬಂದಿದೆ. ನಮ್ಮ ಅಪರಂಪಾರ ಮೇಧಾಶಕ್ತಿ ರಣರಹಿತ ಮಾರಣಕ್ಕೆ ಮಾತ್ರವೇ ಬಳಕೆಯಾಗುತ್ತಿದೆ. ಆದರೆ ಸಹನೆ, ಸಮತೆ, ಸಹಜ ಜೀವನ ಭಾವಗಳು ಅಂತರ್ಗತವಾಗಿ ಹರಿಯುತ್ತಿರುವುದರಿಂದ ಈ ಉದ್ಗಾರ ಅಡಗಿ, ಸಮಾಜ ಪುನಃ ಉಪಶಮನ ಹೊಂದುತ್ತಿದೆ. ದುರ್ಭರ ಜೀವನವನ್ನು ಕಲ್ಪಿಸುವ ಶಕ್ತಿ ವರ್ಷಕ್ಕೆ ಇಲ್ಲವೆಂದೇ ಹೇಳಬೇಕು. ಶಿಶಿರದ ನಂತರ ವಸಂತ ಬಂದಂತೆಯೇ ಈ ವರ್ಷಚಕ್ರದಲ್ಲಿ ರುಧಿರೋದ್ಗಾರಿ, ರಕ್ತಾಕ್ಷಿ, ಕ್ರೋಧನ, ಅಕ್ಷಯ ಉತ್ತರೋತ್ತರ ಸೌಮ್ಯರೂಪಗಳೆಂದೂ, ಪ್ರಭವದಿಂದ ನೂತನ ಚಕ್ರ ಪ್ರಭವವುಂಟಾಗುವುದೆಂದೂ ಸೂಚನೆ. ವಿಶ್ವ ಚಲನೆಯ ಆವೃತ್ತಿಯನ್ನು ಸಾರ್ಥಕ ಶಬ್ದಗಳಲ್ಲಿ ನಿರೂಪಿಸಿದ ಮಹಾಪ್ರಜ್ಞಾವಿಶೇಷದ ಹಿರಿಯರಿಗೆ ನಾವು ವಂದಿಸಬೇಕು.

ಕಾಲವಿಶೇಷವನ್ನು ಹೇಳುವುದಕ್ಕಲ್ಲದೆ ನಿಜಕ್ಕೂ ಇಷ್ಟು ವಿಶ್ಲೇಷಣೆ ಅನವಸರ. ನಮ್ಮ ಜೀವನ ದಾನಗಳಲ್ಲಿ, ಗ್ರಹಗತಿಗಳೊಡನೆ ಸಂಬಂಧ ಹೊಂದಿದ್ದರೂ, ಅವುಗಳ ಗತಿ ಕಲಿಯುಗ ದೈವ ಶ್ರೀವೆಂಕಟೇಶ್ವರನ ಆಜ್ಞಾ ಪರಿಮಿತಿಯಲ್ಲಿ ನಡೆಯಬೇಕು. ಆದ್ದರಿಂದ ಚಿಂತಿಸುವ ವಿಚಾರವೇನಿಲ್ಲ. ಅದೇ ನಮ್ಮ ಮುಖಚಿತ್ರ.

ಮಧುವಾತಾ ಋತಾಯತೇ<br>
ಮಧು ಕ್ಷರಂತಿ ಸಿಂಧವಃ<br>
ಮಾಧ್ವೀರ್ನಸ್ಸಂತ್ವೋಷಧೀಃ

# ರಾಮಾಯಣದ ಇತಿಹಾಸ

ರಾಮಾಯಣವು ಭಾರತೀಯರ ರಾಷ್ಟ್ರೀಯ ಕಾವ್ಯವಾಗಿರುವಂತೆಯೇ ವಿಶ್ವಮಾನ್ಯ ಕಾವ್ಯವೂ ಅಹುದು. ಅಪ್ರತಿಮ ಪ್ರತಿಭೆಯಿಂದ ಋಷಿವರ್ಯರಾದ ವಾಲ್ಮೀಕಿ ಮಹರ್ಷಿಗಳು ತಮ್ಮ ಕಲ್ಪನಾ ಶಕ್ತಿಯಿಂದ ತ್ರಿಕಾಲಾಭಾದಿತವಾದ ಆದರ್ಶ ಬಾಳಿನ ಚಿತ್ರವೊಂದನ್ನು ತಾವು ಕಂಡಂತೆಯೇ ಮುಂದಿನ ಪೀಳಿಗೆಯ ಕ್ಷೇಮಾಭಿವೃದ್ಧಿಗಾಗಿ ರಚಿಸಿದ್ದಾರೆ. ಕಾವ್ಯದ ಪ್ರಾರಂಭದಲ್ಲಿ ಸೂಚಿಸಿರುವಂತೆ ವಾಲ್ಮೀಕಿ ಋಷಿಯು ದೇವಋಷಿಯಾದ ನಾರದರನ್ನು ಕುರಿತು 16 ಗುಣಗಳನ್ನು ನಿರ್ದೇಶಿಸಿ,

'ಮಹರ್ಷೇತ್ವ ಸಮರ್ಥೋಽಸಿ ಜ್ಞಾತುವೇವಂ ವಿಧಂ ನರಮ್' – ಎಂದು ವಿವಿಧ ಗುಣಗಳಿಂದ ಕೂಡಿದ ಮನುಷ್ಯನ ವಿಷಯವಾಗಿ ಪ್ರಶ್ನಿಸಿದರು. ಅದಕ್ಕೆ ನಾರದರು,

> ಬಹವೋ ದುರ್ಲಭಾಶ್ಚೈವ
> ಯೇತ್ವಯಾ ಕೀರ್ತಿತಾ ಗುಣಾಃ ।
> ಮುನೇ ವಕ್ಷ್ಯಾಮ್ಯಹಂ ಬುಧ್ವಾ
> ತೈರ್ಯುಕ್ತಃ ಶ್ರೂಯತಾಂ ನರಃ ॥

ಎಂದು ವಿವಿಧ ಗುಣಾತಿಶಯಗಳಿಂದ ಕೂಡಿದ ನರನ ವಿಷಯವನ್ನು ತಿಳಿಸಿದರು. ವಾಲ್ಮೀಕಿ ಪ್ರಶ್ನೆಮಾಡಿದುದೂ ನರನ ವಿಷಯ, ನಾರದರು ತಿಳಿಸಿದುದೂ ನರನ ವಿಷಯ. ಅದಕ್ಕನುಗುಣವಾಗಿ ವಾಲ್ಮೀಕಿಯು ;

> ಕಾವ್ಯಂರಾಮಾಯಣಂ ಕೃತ್ಸ್ನಂ
> ಸೀತಾಯಾಃ ಚರಿತಂ ಮಹತ್ ।
> ಪೌಲಸ್ತ್ಯವಧಮಿತ್ಯೇವ
> ಚಕಾರ ಚರಿತವ್ರತಃ ॥

ಈ ಕಾರ್ಯವು ರಾಮನು ರಾಜ್ಯಭಾರ ಮಾಡುತ್ತಿರುವಾಗ ಆಗಿರಬೇಕು, ಏಕೆಂದರೆ ರಾಮಾಯಣದಲ್ಲಿ ರಾಮನ ಪೂರ್ಣಚರಿತ್ರೆಯಿದೆ. ರಾಮನು ಅನಂತಗುಣಪೂರ್ಣನಾಗಿ ವಾಲ್ಮೀಕಿಯ ಕಾಲದಲ್ಲಿದ್ದವನು. ಅಂತಹ ರಾಮ ಸೀತೆಯನ್ನು ತೊರೆದ. ಆಕೆಗೆ ವಾಲ್ಮೀಕಿಯ ಆಶ್ರಯ ದೊರೆಯಿತು. ಲವಕುಶರು ಅಲ್ಲಿಯೇ ಜನಿಸಿದರು. ಅದನ್ನೆಲ್ಲ ವಾಲ್ಮೀಕಿ ಕಣ್ಣಾರೆ ಕಂಡಿದ್ದಾರು. ಅವರಿಗೆ ಸೀತಾರಾಮರ ಕಥೆ ಬಹು ಕರುಣಾಮಯವಾಗಿ ಕಂಡಿರಬೇಕು. ಅದನ್ನು ನೋಡಿ ರಾಮಾಯಣವನ್ನು ರಚಿಸಿದರು. ಅದನ್ನು ಬಾಲಕರಿಗೆ ಕಲಿಸಿದರು. ರಾಮನು ಅಶ್ವಮೇಧ ಯಾಗವನ್ನು ಮಾಡಿದಾಗ ಆ ಬಾಲಕರು ಅದನ್ನು ಹಾಡಿದರು. ನೆರೆದ ಸಭೆಯಲ್ಲಿ ವಾಲ್ಮೀಕಿ ಮಹರ್ಷಿಗಳು ಸೀತಾದೇವಿಯ ಪಾತಿವ್ರತ್ಯವನ್ನು ಸ್ಥಿರಪಡಿಸಿ ರಾಮನು ಆ ಸಾಧ್ವಿಯನ್ನು ಸ್ವೀಕರಿಸಲು ಕೋರಿದರು. ಅದು ಸಾಧ್ಯವಾಗಲಿಲ್ಲ. ಇದರ ಪ್ರಭಾವದಿಂದಲೇ ರಾಮಾಯಣದಲ್ಲಿ ರಾಮನ ದಿವ್ಯ ಚರಿತ್ರೆ, ಸೀತೆಯ ಮಹಚ್ಚರಿತ್ರೆ, ಪೌಲಸ್ತ್ಯವಧೆ, ಇವು ಮೂರೂ ಪ್ರಧಾನಪಾತ್ರವನ್ನು ವಹಿಸಿವೆ.

ಕಾವ್ಯದಲ್ಲಿ ಈ ರೀತಿಯ ವಿವರಣೆಯಿದ್ದರೂ ಮಹಾಕವಿ ವಾಲ್ಮೀಕಿ ರಾಮನಿಗಿಂತ ಎಷ್ಟೋ ಕಾಲ ಈಚಿನವರೆಂದು ತಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ರಾಮಾಯಣವು ಕ್ರಿ. ಪೂ. 4ನೆಯ ಶತಮಾನದ ವೇಳೆಗೆ ರಚಿತವಾಯಿತೆಂದೂ ಕ್ರಿ. ಶ. 2ನೆಯ ಶತಮಾನದ ವೇಳೆಗೆ ಈಗಿನ ರೂಪವನ್ನು ತಾಳಿತೆಂದೂ ಸಂಶೋಧಕರ ಮತ. ಕೆಲವರು ರಾಮಾಯಣದ ರಚನಾ ಕಾಲವನ್ನು ಕ್ರಿ. ಪೂ. 12 ನೆಯ ಶತಮಾನಕ್ಕೆ ಕೊಂಡೊಯ್ಯುವುದೂ ಉಂಟು. ರಾಮನ ಕಾಲಕ್ಕೂ ರಾಮಾಯಣದ ರಚನಾಕಾಲಕ್ಕೂ ಮಧ್ಯೆ ಈ ಕಥೆ ಪ್ರಚಾರದಲ್ಲಿದ್ದಿರಬೇಕೆಂದೂ ಕುಶೀಲವರೂ, ಸೂತರೂ ಪೌರಾಣಿಕರೂ, ಶ್ರೋತೃವರ್ಗಕ್ಕೆ ಈ ಕಥೆಯನ್ನು ಪ್ರಚಾರ ಮಾಡುತ್ತಿದ್ದಿರಬೇಕೆಂದೂ ಪ್ರಸಿದ್ಧವಾದ ಆ ಕಥೆಯ ಆಧಾರದ ಮೇಲೆ ವಾಲ್ಮೀಕಿಗಳು ಅದಕ್ಕೆ ಸ್ಥೂಲವೂ ನಿಷ್ಕೃಷ್ಟವೂ ಆದ ರೂಪವನ್ನು ಕೊಟ್ಟರೆಂದೂ ಸಂಶೋಧಕರ ಅಭಿಪ್ರಾಯ.

ಶ್ರೀರಾಮಾಯಣದ ರಚನಾಕಾಲವಾವುದಾದರೂ ಅದರ ನಾಯಕನಾದ ರಾಮನ ನಿಲುವು ಮನುಷ್ಯನದೇ. ಅವನ ಹಿಂದಿನ ಚರಿತ್ರೆಯೇನಾಗಿರಬಹುದಾದರೂ ಇಲ್ಲಿ ವರ್ಣಿತವಾಗಿರುವುದು ಮಾನವ ಚರಿತ್ರೆ. ರಾವಣಸಂಹಾರ ಸಾಧ್ಯವಾದುದೂ ಮನುಷ್ಯನಾದುದರಿಂದ, ರಾವಣಾದಿಗಳ ವಧೆಯಾದಮೇಲೆ ಸೀತೆಯ ಅಗ್ನಿಪ್ರವೇಶ ಸಂದರ್ಭದಲ್ಲಿ ಅವಳ ಪಾರಿಶುಧ್ಯವನ್ನೂ ದೃಢೀಕರಿಸುವುದಕ್ಕೆ ಬಂದ ಬ್ರಹ್ಮನು ರಾಮನನ್ನು ಬಗೆಬಗೆಯಾಗಿ ಸ್ತೋತ್ರಮಾಡಿ

> ಸೀತಾ ಲಕ್ಷ್ಮೀಃ ಭರ್ವಾ ವಿಷ್ಣುಃ
> ದೇವಃ ಕೃಷ್ಣಃ ಪ್ರಜಾಪತಿಃ ।
> ವಧಾರ್ಥಂ ರಾವಣಸ್ಯೇಹ
> ಪ್ರವಿಷ್ಟಃ ಮಾನುಷೀಂ ತನುಂ ॥

ಎಂದು ಹೇಳುತ್ತಾನೆ. ಅದಕ್ಕೆ ರಾಮನು ಒಪ್ಪದೇ 'ಆತ್ಮಾನಂ ಮಾನುಷಂ ಮನ್ಯೇ ರಾಮಂ ದಶರಥಾತ್ಮಜಂ' ಎನ್ನುವನು. ಇದರಿಂದ ರಾಮನ ನಡವಳಿಕೆಯಲ್ಲಿ ಒಂದು ಹೊಂದಾಣಿಕೆಯಿದೆ. ರಾಮನು ವಿಶ್ವಮಾನ್ಯನಾದ ನಮ್ಮ ರಾಷ್ಟ್ರೀಯ ಮಹಾಕಾವ್ಯದ ನಾಯಕ. ಅವನಲ್ಲಿಲ್ಲದ ಸದ್ಗುಣಗಳೇ ಇಲ್ಲ. ಅತನನ್ನು ವಾಲ್ಮೀಕಿ, ನಾರದ, ದಶರಥ, ಅಯೋಧ್ಯೆಯಜನ, ಋಷಿವರ್ಗ, ಹನುಮಂತ ಅಷ್ಟೇ ಅಲ್ಲ ; ಅವನ ಪ್ರತಿಪಕ್ಷದವರಾದ ಶೂರ್ಪನಖಿ, ಮಾರೀಚ, ವಿಭೀಷಣ, ಕುಂಭಕರ್ಣ ರಾವಣರೂ ಕೂಡಾ ಸಮಯ ಸಿಕ್ಕಿದಾಗಲೆಲ್ಲ ಬಾಯಿತುಂಬ ಹೊಗಳವರು. ಇಂತಹ ಪ್ರಚಂಡ ಗುಣಶಾಲಿಯಾದರೂ ಮಾನವ ಸಹಜವಾದ ದೌರ್ಬಲ್ಯ ಅವನಲ್ಲಿ ಇಲ್ಲದೆ ಇಲ್ಲ. ಮನಸ್ಸುತುಂಬ ಕಲಕಿ ಹೋದ ಸನ್ನಿವೇಶದಲ್ಲಿ ಎದೆಗರಗುವ ಸನ್ನಿವೇಶವೂ ಇಲ್ಲದೇ ಇಲ್ಲ. ಆದರೂ ಲಕ್ಷ್ಮಣಾದಿಗಳು ಸೂಕ್ತವಾಕ್ಯಗಳಿಂದ ಸಮಾಧಾನಪಡಿಸಿದಾಗ ಜಿತೇಂದ್ರಿಯನಾಗಿ ವಿವೇಕವನ್ನು ತಂದುಕೊಳ್ಳುತ್ತಾನೆ. ಅದೇ ಅವನ ಆದರ್ಶನಡತೆ. ಪ್ರತಿಮಾನವನಲ್ಲಿಯೂ ಆಗ ಬೇಕಾದುದೂ ಅದೇ. ರಾಮನು ತಂದೆಯು ತನಗೆ ಯುವರಾಜ್ಯಾಭಿಷೇಕ ಮಾಡುವೆನೆಂದಾಗ ಹಿಗ್ಗಲಿಲ್ಲ ವನವಾಸಕ್ಕೆ ಹೋಗಬೇಕೆಂದಾಗ ಕುಗ್ಗಲಿಲ್ಲ. ಅವನ ಜಿತೇಂದ್ರಿಯ ಮನಃಪ್ರವೃತ್ತಿ ಯಾವ ಸಂದರ್ಭದಲ್ಲಿಯೂ ಅವನು ವಿಚಲಿತನಾಗಲು ಅವಕಾಶ ಕೊಡಲಿಲ್ಲ.

ರಾಮನ ದಾಂಪತ್ಯಜೀವನ ಅನಾದೃಶವಾದುದು. ವಾಲ್ಮೀಕಿಯು ಅದನ್ನು ಅನೇಕ ಸಂದರ್ಭಗಳಲ್ಲಿ ಬಹು ಧ್ವನಿಯುಕ್ತವಾಗಿ ವರ್ಣಿಸುತ್ತಾರೆ. ಸೀತಾಪಹರಣವಾದ ಮೇಲೆ ರಾಮನ ವಿರಹದುಃಖವನ್ನು ಬಹುಮಾರ್ಮಿಕವಾಗಿ ವರ್ಣಿಸಿದ್ದಾರೆ. ಸೀತೆ ಸಿಕ್ಕದೇ ಹೋದರೆ ರಾಮನು ಲೋಕವನ್ನೇ ಭಸ್ಮೀಭೂತವನ್ನಾಗಿಸುತ್ತೇನೆ ಎನ್ನುತ್ತಾನೆ. ಲಕ್ಷ್ಮಣನ ಹಿತೋಕ್ತಿಯಿಂದ ತಕ್ಷಣ ಸ್ವಸ್ಥಚಿತ್ತನಾಗುತ್ತಾನೆ. ಇದೇ ರಾಮ ರಾವಣವಧೆಯಾದ ಮೇಲೆ ಸೀತಾದೇವಿಯನ್ನು ಅಗ್ನಿಪರೀಕ್ಷೆಗೆ ಗುರಿಮಾಡುತ್ತಾನೆ. ಎಂತಹ ಸಂವೇದನೆ ಎಂತಹ ಸಂಯಮ! ವಾಲ್ಮೀಕಿಯ ರಾಮನನ್ನು ನೋಡಿದಾಗ, ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ, ಎಂಬ ವಾಕ್ಯವು ಜ್ಞಾಪಕಕ್ಕೆ ಬರುತ್ತದೆ. ರಾಮನ ಪಕ್ಷ ಪ್ರತಿಪಕ್ಷಗಳ ಒಂದೊಂದು

**ಡಾ॥ ಎನ್. ಅನಂತರಂಗಾಚಾರ್**

ವ್ಯಕ್ತಿಯೂ ಮಾನವನ ಒಂದೊಂದು ಪ್ರತ್ಯೇಕ ಮುಖದ ಪ್ರತೀಕ. ಆ ಪಾತ್ರವನ್ನು ಸ್ವಲ್ಪ ವ್ಯತಾಸ ಮಾಡಿದರೂ ಮೂಲೋದ್ದೇಶಕ್ಕೇ ಭಂಗ ಬರುತ್ತದೆ. ಒಂದೇ ವರ್ಗದ ಪಾತ್ರಗಳಲ್ಲಿಯೂ ಈ ರೀತಿಯಾದ ಭಿನ್ನತೆಯ ಸೂಕ್ಷ್ಮಾಂಶವನ್ನು ಕಾಣಬಹುದು. ಆದುದರಿಂದಲೇ ಸ್ತ್ರೀ ಪುರುಷರೆನ್ನದೆ ಪಂಡಿತ ಪಾಮರರೆನ್ನದೆ ಉಚ್ಚನೀಚರೆನ್ನದೆ ಭಾರತದ ಪ್ರತಿಯೊಂದು ವ್ಯಕ್ತಿಯೂ ಇದರ ಪ್ರಭಾವಕ್ಕೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಒಳಗಾಗಿದ್ದಾನೆ. ತನ್ನ ಜೀವನದ ಸುಖದುಃಖಗಳ ಪ್ರತಿಬಿಂಬವನ್ನು ಅದರಲ್ಲಿ ಕಂಡು ತನ್ನ ಬಾಳನ್ನು ಹದನಾಗಿಸಿಕೊಳ್ಳುವುದಕ್ಕೆ ಅದನ್ನು ಆದರ್ಶವನ್ನಾಗಿ ಭಾವಿಸಿದ್ದಾನೆ. ಕವಿಯ ಮೂಲೋದ್ದೇಶವೂ ಅದೇ ಎಂದು ಕಾಣುತ್ತದೆ. ಆದರ್ಶಪಿತ, ಆದರ್ಶಮಾತಾ, ಆದರ್ಶಪುತ್ರ, ಆದರ್ಶ ಪತ್ನಿ, ಆದರ್ಶಭ್ರಾತಾ, ಆದರ್ಶಮಿತ್ರ, ಆದರ್ಶದೂತ,– ಹೀಗೆ ಎಷ್ಟೋ ಆದರ್ಶಗಳ ಚಿತ್ರವನ್ನು ಕೊಡುವುದು ಕವಿಯ ಪ್ರಧಾನಧ್ಯೇಯ. ಹಾಗೆಯೇ ತ್ಯಾಜ್ಯವಸ್ತುಗಳ ಚಿತ್ರವನ್ನು ಬಹು ಹೃದಯಂಗಮವಾಗಿ ಕೊಡುವುದರಲ್ಲಿ ಉದ್ಯುಕ್ತನಾಗಿದ್ದಾನೆ. ವಸ್ತು ಇಹಲೋಕದಲ್ಲಿ ಕಂಡು ಕೇಳಿದ ಯಾರು ಬೇಕಾದರೂ ಅನುಭವಿಸಬಹುದಾದ ಕತೆ. ಪಾತ್ರಗಳು ಮಾನವ ಲೋಕಕ್ಕೆ ಸಹಜವಾದ ದೇಶಕಾಲಗಳ ಭೇದವಿಲ್ಲದೆ ಸುಖದುಃಖಗಳನ್ನನುಭವಿಸಿ ಮಾನವತ್ವದಿಂದ ದೇವತ್ವಕ್ಕೆ ಏರಿದ ಶ್ರೇಷ್ಠವ್ಯಕ್ತಿಗಳು. ಎಲ್ಲರಿಗೂ ಸಮಾನವಾದ ತೃಪ್ತಿಯನ್ನುಂಟುಮಾಡುವ ಜೀವನ – ಸಂದೇಶಗಳು– ಇವುಗಳಿಂದ ಆದಿಕಾವ್ಯವು ಸರ್ವ ದೃಷ್ಟಿಯಿಂದಲೂ ಅದ್ಭುತವಾಗಿದೆ. ಇಲ್ಲಿ ಬಹು ಉತ್ತಮೋತ್ತಮವಾದ ರಾಮನ ಚಿತ್ರವೇ ಅಲ್ಲದೆ ಸೀತಾದೇವಿಯ ಪಾತಿವ್ರತ್ಯ, ಲಕ್ಷ್ಮಣನ ಕೈಂಕರ್ಯ ಮನೋಭಾವ, ಭರತನ ಸೌಧರ್ಮ್ಯ, ಸುಗ್ರೀವನ ಮೈತ್ರಿ, ಹನುಮಂತನ ಕರ್ತವ್ಯನಿಷ್ಠೆ, ವಿಭೀಷಣನ ಪ್ರಪತ್ತಿ ಮತ್ತು ಧರ್ಮನಿಷ್ಠೆ, ಕೌಸಲ್ಯೆಯ ಪುತ್ರ ಪ್ರೇಮ, ಕೈಕೇಯಿಯ ಹಟಮಾರಿತನ, ಸುಮಿತ್ರೆಯ ಸಪತ್ನೀಸ್ನೇಹ, ಮಂಥರೆಯ ಕೌಶಲ್ಯ ರಾವಣ ಆತ್ಮ ಪ್ರತ್ಯಯ – ಮೊದಲಾದವು ಕವಿಯ ಲೇಖನಿಯಲ್ಲಿ ಬಹು ಶ್ಲಾಘ್ಯವಾಗಿ ಪ್ರತಿಪಾದಿತವಾಗಿವೆ. ಯಾವ ಪಾತ್ರದ ಚಿತ್ರಣದಲ್ಲಿಯೂ ಅವನು ಮಾನವನೆಂಬುದನ್ನು ಮರೆತಿಲ್ಲ. ಎಲ್ಲವನ್ನೂ ಧರ್ಮದ ಒರೆಗಲ್ಲಿನಲ್ಲಿ ಹಚ್ಚಿತೋರಿಸಿದ್ದಾರೆ. ಜೀವನದಲ್ಲಿ ಧರ್ಮಕ್ಕೆ ಪ್ರಾಧಾನ್ಯವನ್ನು ಕೊಟ್ಟಿದ್ದಾರೆ. ಅರ್ಥಕಾಮಗಳು ಧರ್ಮಕ್ಕೆ ಅಧೀನವಾಗಿರುವವರೆಗೆ ಅವು ಸುಖಕ್ಕೆ ಹೇತುವಾಗಿರುತ್ತವೆ ಅವು ಧರ್ಮವನ್ನು ಮೀರಿ ವಿರೋಧವಾಗಿ ಉಲ್ಬಣಾವಸ್ಥೆಗೆ ಬಂದಾಗ ವ್ಯಕ್ತಿಯ ಸ್ವಂತವೇ ಅಲ್ಲದೆ ಸುತ್ತಮುತ್ತಲಿನ ಅವನತಿಗೂ ಕಾರಣವಾಗುತ್ತವೆ. ಕೆಲಸಲ ಭಿನ್ನಧರ್ಮಗಳಿಗೆ ಘರ್ಷಣೆಯುಂಟಾದಾಗ ಯಾವ ಧರ್ಮವನ್ನವಲಂಬಿಸಿದರೂ ಅನರ್ಥವುಂಟಾಗಬಹುದು. ಅದನ್ನು ತಪ್ಪಿಸಲು ವ್ಯಕ್ತಿಗೂ ಸ್ವಾತಂತ್ರ್ಯವಿರುವುದಿಲ್ಲ. ವಿಧಿ ನಿಯಮ, ಆಗ ಅದು ಜೀವನದ ಸಹಜಧರ್ಮವೆಂದು ತಿಳಿದು ತಾಳ್ಮೆಯಿಂದ ಅನುಭವಿಸಬೇಕು. ಈ ತಾಳ್ಮೆಯೇ ಅನೇಕಸಲ ವ್ಯಕ್ತಿಯನ್ನು ದುಃಖದಿಂದ ಪಾರು ಮಾಡುತ್ತದೆ. ಇದೇ ಸುಖ ಜೀವನದ ಚರಮ ಸಂಜೀವನವೆಂಬುದನ್ನು ಕವಿಯು ಬಹು ಹೃದಯಂಗಮವಾಗಿ ವರ್ಣಿಸಿದ್ದಾರೆ. ಅದಕ್ಕನುಗುಣವಾಗಿಯೇ ಕಾವ್ಯದುದ್ದಕ್ಕೂ ಮಾರ್ಗದರ್ಶಕವಾದ ಸಾವಿರಾರು ಸುಭಾಷಿತಗಳು ಉಕ್ತವಾಗಿವೆ. ಕವಿಯು ಜೀವನದಲ್ಲಿ ಶೀಲಕ್ಕೆ ಕೊಟ್ಟಿರುವ ಸ್ಥಾನವು ಅತ್ಯಮೋಘವಾದುದು.

ಆದರ್ಶಮಾನವ ಮತ್ತು ಆದರ್ಶ ಜೀವನವನ್ನು ಚಿತ್ರಿಸಲು ಹೊರಟ ವಾಲ್ಮೀಕಿಯ ಕಾಲಕ್ಕೆ ಕೆಲವು ಅಮಾನವೀಯ ಸನ್ನಿವೇಶಗಳೂ ಅಭಿಪ್ರಾಯಗಳೂ ಜನರ ಮನಸ್ಸಿನಲ್ಲಿ ರೂಢಮೂಲವಾಗಿತ್ತೆಂದು ಕಾಣುತ್ತದೆ. ದೇವ ಮನುಷ್ಯ ಸಂಬಂಧ, ಸ್ವರ್ಗ ಮರ್ತ್ಯಗಳ ಸಂಪರ್ಕ, ದೇವಮಾನವರ ಅದ್ಭುತ ಶಕ್ತಿ ಮತ್ತು ರೂಪಾಂತರೀಕರಣ – ಇವು ಅಂಗೀಕೃತವಾಗಿದ್ದಿರಬೇಕು. ಆದುದರಿಂದಲೇ ದಶರಥನು ದೇವಾಸುರರ ಯುದ್ಧದಲ್ಲಿ ಭಾಗವಹಿಸಿರುವುದು, ಹನುಮಂತನು ನೂರು ಯೋಜನದ ಸಾಗರವನ್ನು ಲಂಘನ ಮಾಡುವುದು, ಮಾತಲಿ ಇಂದ್ರಲೋಕದಿಂದ ಬಂದು ರಾಮನಿಗೆ ಸಹಾಯಮಾಡುವುದು – ಇವು ಜನ ಸಾಮಾನ್ಯರಿಗೆ ಒಪ್ಪಿಗೆಯಾಗಿದ್ದುದರಿಂದ ಕವಿಯು ತನ್ನ ಕಾವ್ಯದಲ್ಲಿ ಅವುಗಳನ್ನು ಅಳವಡಿಸಿದ್ದಾರೆ. ಕೆಲವು ಸಂಶೋಧಕರು ಈ ಅಮಾನವೀಯ ಭಾಗಗಳೆಲ್ಲ ಈಚೆಗೆ ಸೇರಿಕೊಂಡ ಪ್ರಕ್ಷಿಪ್ತಗಳೆಂದೂ ಸ್ವಲ್ಪ ಕಷ್ಟಪಟ್ಟರೆ ಮೂಲ ರಾಮಾಯಣದ ಸ್ವರೂಪವನ್ನು ನಿಷ್ಕರ್ಷಿಸುವುದು ಸಾಧ್ಯವೆಂದೂ ಅಭಿಪ್ರಾಯಪಡುತ್ತಾರೆ ಆದರೂ ಈ ಅಮಾನವ ಭಾಗಗಳು ಕಾವಕ್ಕೆ ನಿಜವಾದ ಪೂಜ್ಯತೆಯನ್ನೂ ಶೋಭೆಯನ್ನೂ ಉಂಟುಮಾಡಿವೆ.

ಹೇಗಾದರೂ ಮುಂದಿನ ಕವಿಗಳನೇಕರು ರಾಮಕಥೆಯನ್ನು ತಮ್ಮ ದೃಷ್ಟಿಧ್ಯೇಯ ಧೋರಣೆಗಳಿಗನುಗಣವಾಗಿ ಮಾರ್ಪಡಿಸಿ ಕೊಂಡಿದ್ದಾರೆ. ವಸ್ತುವನ್ನೂ ಪಾತ್ರಗಳನ್ನು ತಮ್ಮ ಆವಶ್ಯಕತೆಗನುಗುಣವಾಗಿ ವ್ಯತ್ಯಾಸಮಾಡಿ ಕಥೆಯನ್ನೂ ಹಿಗ್ಗಿಸಿ ಕುಗ್ಗಿಸಿ ತಮ್ಮದೇ ಆದ ರೀತಿಯನ್ನು ಬಳಕೆಗೆ ತಂದಿದ್ದಾರೆ. ಭಿನ್ನ ಸಂಸ್ಕೃತಿಗಳ ಸಂಪರ್ಕದಿಂದ ಅವು ಸ್ವತಂತ್ರ ಕೃತಿಗಳಂತೆಯೇ ಭಾಸ

ವಾಗುತ್ತವೆ. ಕಾವ್ಯವನ್ನು ಉತ್ತಮಪಡಿಸುತ್ತೇನೆಂದು ಪ್ರಯತ್ನಿಸಿ ಮೂಲದಿಂದ ಬಹು ಭಿನ್ನವಾಗಿರುವುದೂ ಉಂಟು. ಕಾವ್ಯ ಸೌಂದರ್ಯವನ್ನು ಮೂಲೋದ್ದೇಶವನ್ನು ಭಂಗಮಾಡಿರುವುದೂ ಉಂಟು.

ಕಾಲದೃಷ್ಟಿಯಿಂದ ಮಹಾಭಾರತಾಂತರ್ಗತವಾದ 'ರಾಮೋಪಾಖ್ಯಾನವು' ವಾಲ್ಮೀಕಿ ರಾಮಾಯಣಕ್ಕೆ ಅತಿ ನಿಕಟವಾದುದು. ಕಳೆದ ಸುಮಾರು ಒಂದು ನೂರು ವರ್ಷದ ಪ್ರಾಶ್ಚಾತ್ಯ ಪೌರಸ್ತ್ಯ ಪಂಡಿತರ ಬಹುಮುಖ ಸಂಶೋಧನೆಯಿಂದ ರಾಮಾಯಣವು ಮಹಾಭಾರತಕ್ಕಿಂತ ೫೦೦ ವರ್ಷಗಳಾದರೂ ಹಿಂದಿನದೆಂದು ನಿಷ್ಕರ್ಷೆಯಾಗಿದೆ. ಈ ಎರಡು ಇತಿಹಾಸಗಳ ಕಾಲವೂ ಅನಿರ್ದಿಷ್ಟವಾಗಿಯೇ ಉಳಿದಿದೆ. ಹಾಗೆಯೇ ರಾಮಾಯಣ ಮಹಾಭಾರತಗಳ ಪೂರ್ವಾಪರ ವಿಷಯವಾಗಿ ಭಿನ್ನಾಭಿಪ್ರಾಯವಿದ್ದರೂ ಬಹುಮತದಿಂದ ರಾಮಾಯಣವು ಮಹಾಭಾರತಕ್ಕಿಂತ ಹಿಂದಿನದೆಂದು ಅಂಗೀಕೃತವಾಗಿದೆ. ಆದುದರಿಂದ ರಾಮಾಯಣ ಸಾಹಿತ್ಯ ಚರಿತ್ರೆಯಲ್ಲಿ ರಾಮೋಪಾಖ್ಯಾನಕ್ಕೆ ಒಂದು ನಿರ್ದಿಷ್ಟ ಸ್ಥಾನವಿದೆ. ಎನಿಲ್ಲದಿದ್ದರೂ ಅದು ಆಕಾಲದಲ್ಲಿ ಪ್ರಚಾರದಲ್ಲಿದ್ದ ರಾಮ ಕಥೆಯ ಸ್ಥೂಲರೂಪವನ್ನು ಪ್ರದರ್ಶಿಸುತ್ತದೆ.

ಇವೆರಡಕ್ಕೂ ಕೆಲವು ವ್ಯತ್ಯಾಸಗಳಿವೆ. ಉಪಾಖ್ಯಾನವು ರಾವಣನ ಕಥೆಯಿಂದ ಆರಂಭವಾಗುತ್ತದೆ. ರಾಮಾಯಣದ ಬಾಲಕಾಂಡದ ಬಹುಭಾಗವೂ ಆದರಲ್ಲಿಲ್ಲ. ಇದು ಇವೆಲ್ಲ ಮೂಲ ರೂಪದಲ್ಲಿರಲಿಲ್ಲ ಎಂಬ ವಾದದ ಅಭಿಪ್ರಾಯವನ್ನೂ ಸಮರ್ಥಿಸುತ್ತದೆ. ಇಲ್ಲಿಯ ಸೀತೆಯು ಅಯೋನಿಜೆಯಾದರೂ ಜನಕನ ಯಜ್ಞಭೂಮಿಯಲ್ಲಿ ದೊರೆತವಳಲ್ಲ. ದಶರಥನ ಪುತ್ರಕಾಮೇಷ್ಟಿ ಯಾಗ ಮತ್ತು ವಿಶ್ವಾಮಿತ್ರನ ಯಾಗಸಂರಕ್ಷಣೆಗಳ ಪ್ರಸ್ತಾಪವೂ ಇಲ್ಲ. ಋಷ್ಯಶೃಂಗನ ವೃತ್ತಾಂತ, ರಾಮನಿಗೆ ವಿಶ್ವಾಮಿತ್ರರ ಮಂತ್ರೋಪದೇಶ, ತಾಟಕಾಸಂಹಾರ, ಕುಶನಾಭ ವೃತ್ತಾಂತ, ಸಗರವೃತಾಂತ, ಅಹಲ್ಯೋದ್ಧಾರ, ವಿಶ್ವಾಮಿತ್ರರ ಜೀವನವೃತ್ತಾಂತ, ಸೀತಾ ಕಲ್ಯಾಣ, ಪರಶುರಾಮ ಗರ್ವಭಂಗ ಇವುಗಳಾವುವೂ ಇಲ್ಲ.

ಉತ್ತರಕಾಂಡದಲ್ಲಿಯೂ ಸೀತಾಪರಿತ್ಯಾಗ, ಲವಕುಶರ ಜನನ, ಸೀತೆಯ ಭೂವಿವರ ಪ್ರವೇಶ, ಶಂಬೂಕ ಲವಣಾಸುರರ ವೃತ್ತಾಂತ, ರಾವಣನ ಜೈತಯಾತ್ರೆ, ಶೃಂಗಯಯಾತಿಗಳ ಉಪಾಖ್ಯಾನ ಇವುಗಳಾವುವೂ ಇಲ್ಲ, ರಾವಣ ಕುಂಭಕರ್ಣಾದಿಗಳ ತಪೋವರ್ಣನೆಗಳು, ಕೂಬರವೃತ್ತಾಂತ ಮುಂತಾದ ಸಣ್ಣ ಸಂಗತಿಗಳು ವಿವರವಾಗಿದೆ. ರಾಮಾಯಣದ ಕೈಕೇಯಿಯ ಮೂರ್ಖತನ ಇಲ್ಲಿ ಕಾಣುವುದಿಲ್ಲ, ಇಲ್ಲಿ ಸೀತೆಯ ಅಗ್ನಿಪ್ರವೇಶವಿಲ್ಲ.

ರಾಮೋಪಾಖ್ಯಾನದಲ್ಲಿ ವಾಲಿಯು ಸುಗ್ರೀವನ ಹೆಂಡತಿಯನ್ನು ಅಪಹರಿಸುವುದಿಲ್ಲ. ವಾಲಿ ಸತ್ತ ಮೇಲೆ ಸುಗ್ರೀವನು ತಾರೆಯನ್ನು ಪರಿಗ್ರಹಿಸುತ್ತಾನೆ. ರಾಮ ಸುಗ್ರೀವರಿಗೆ ಸಮಾನ ದುಃಖ ರಾಜ್ಯವನ್ನು ಕಳೆದು ಕೊಂಡಿರುವುದು; ದಾರಾ ವಿಯೋಗವಲ್ಲ.

ಉಪಾಖ್ಯಾನದಲ್ಲಿ ಕುಂಭಕರ್ಣನನ್ನು ಕೊಲ್ಲುವವನು ಲಕ್ಷ್ಮಣ, ರಾಮನಲ್ಲ. ಕುಂಭಕರ್ಣನಿಗೆ ಸಹಾಯಕರಾಗಿ ವಜ್ರವೇಗ ಮತ್ತು ಪ್ರಮಾಥಿಗಳೆಂಬುವರು ಬರುತ್ತಾರೆ. ಉಪಾಖ್ಯಾನದ ಕಾಲಕ್ಕೆ ರಾಮಾಯಣದ ಕಥೆಯು ಜನಗಳ ಮನಸ್ಸಿನಲ್ಲಿ ವ್ಯತ್ಯಾಸವಾಗಿತ್ತೋ, ಮೂಲ ರಾಮಾಯಣವೇ ಹಾಗಿತ್ತೋ, ಹೇಳಲು ಸಾಧ್ಯವಿಲ್ಲ. ಏನಾದರೂ ರಾಮಾಯಣದ ಕಥಾಶರೀರವೂ ಧ್ಯೇಯವೂ ಉಪಾಖ್ಯಾನದ ಕಾಲಕ್ಕೆ ಮಾರ್ಪಾಟಾಗಿರಬೇಕು.

ಬೌದ್ಧರು ರಾಮಕಥೆಯನ್ನು ತಮ್ಮ ಮತ ಪ್ರಚಾರ ಸಾಧನವನ್ನಾಗಿ ಉಪಯೋಗಿಸಿಕೊಂಡರು. ಬೌದ್ಧರ ದಶರಥ ಜಾತಕದಲ್ಲಿ ರಾಮ ಕಥೆ ಉಕ್ತವಾಗಿದೆ. ಇದರಲ್ಲಿ ರಾವಣ ಪ್ರಸ್ತಾಪವೇ ಇಲ್ಲ. ಸೀತಾಪಹರಣವೂ ಅದರ ಮುಂದಿನ ಭಾಗವೂ ಇಲ್ಲ. ರಾಮಲಕ್ಷ್ಮಣ ಸೀತೆಯರು ಅಣ್ಣ ತಂಗಿಯರು. ಒಬ್ಬ ತಾಯಿಯ ಮಕ್ಕಳು. ದಶರಥನ ಹದಿನಾರುಸಾವಿರ ಹೆಂಡತಿಯರಲ್ಲಿ ಪ್ರಧಾನಳಾದ ಒಬ್ಬಳ ಮಗ ಭರತ. ಆ ರಾಣಿಗೆ ದಶರಥನು ಎಂದೋ ಒಂದು ವರವನ್ನು ಕೊಟ್ಟಿದ್ದ. ರಾಮನಿಗೆ ಪಟ್ಟಾಭಿಷೇಕವಾಗುವ ಕಾಲದಲ್ಲಿ ಈ ವರವು ಅಡ್ಡಲಾಗಿ ಬಂದಿತು. ರಾಮಲಕ್ಷ್ಮಣ ಸೀತೆಯರು ಕಾಡಿಗೆ ಹೋಗಬೇಕಾಗಿ ಬಂದಿತು. ಅನಂತರ ದಶರಥನ ಮರಣ ಸಂಭವಿಸುತ್ತದೆ. ಭರತನು ಅಣ್ಣನ ಬಳಿಗೆ ಹೋಗಿ ರಾಜ್ಯವನ್ನು ಸ್ವೀಕರಿಸಬೇಕೆಂದು ಬೇಡುತ್ತಾನೆ. ಅವಧಿ ಕಳೆದ ಮೇಲೆ ರಾಮನು ಹಿಂದಕ್ಕೆ ಬಂದು ಸೀತೆಯನ್ನು ಮದುವೆಯಾಗಿ ಸುಖದಿಂದ ರಾಜ್ಯಭಾರ ಮಾಡುತ್ತಾನೆ. ಈ ಕಥೆಯಲ್ಲಿ ರಾಮಪಂಡಿತನು ಸತ್ವಗುಣ ಪ್ರಧಾನನಾದ ಬುದ್ಧನಿಗೆ ಸಾಟಿಯಾದ ವ್ಯಕ್ತಿ. ಪರಮ ಸಾಧು, ಧರ್ಮ ಮೂರ್ತಿಯಾದ ಇವನನ್ನು ತಮ್ಮವನನ್ನಾಗಿ ಮಾಡಿಕೊಂಡು ಬುದ್ಧನ ಹಿಂದಿನ ಜನ್ಮಗಳ ಒಂದು ಅವತಾರವೆಂದು ಪರಿಗಣಿಸಿದ್ದಾರೆ.

ಜೈನರಾಮಾಯಣಕ್ಕೆ 'ಪದ್ಮಚರಿತ' ವೆಂದು ಹೆಸರು. ಪ್ರಾಕೃತದಲ್ಲಿ ಅದಕ್ಕೆ 'ಪಉಮ ಚರಿಯ' ಎಂದು ನಾಮಧೇಯ. ರಾಮನ ಪೂರ್ವಭವ ಮತ್ತು ಪುನರ್ಭವಗಳ ವೃಷ್ಟಿಯಿಂದ ಕಥೆಯನ್ನು ವಿಶೇಷವಾಗಿ ವಿಸ್ತರಿಸಿದ್ದಾರೆ. ಈ ಕಥೆಯನ್ನು ತಮ್ಮ ತ್ರಿಷಷ್ಠಿ ಶಲಾಕಾಪುರುಷ ಚರಿತ್ರೆಯಲ್ಲಿ ಅಳವಡಿಸಿಕೊಂಡಿದ್ದಾರೆ. ರಾಮ ಅಥವಾ ಪದ್ಮ ಲಕ್ಷ್ಮಣ ಮತ್ತು ರಾವಣರು ಶಲಾಕಾಪುರುಷರಲ್ಲಿ ಪ್ರಧಾನವಾಗಿ ರೂಪಗೊಂಡಿದ್ದಾರೆ. ಎಂಟನೆಯ ಬಲದೇವ, ವಾಸುದೇವ ಮತ್ತು ಪ್ರತಿವಾಸುದೇವರಾಗಿದ್ದಾರೆ. ಅಧ್ಯಾತ್ಮ ಜೀವನದಲ್ಲಿ ಅದ್ಭುತ ಉತ್ಕ್ರಾಂತಿಯನ್ನು ಸಾಧಿಸಿದ ಮಹಾಪುರುಷರುಗಳಾಗಿದ್ದಾರೆ. ಇಲ್ಲಿಯ ರಾಮ ಬಲದೇವನಾಗಿದ್ದಾನೆ. ಇವನು ಬಲಭದ್ರನೂ ಅಹುದು. ಲಕ್ಷ್ಮಣನೇ ವಾಸುದೇವ–ನಾರಾಯಣ ಇಬ್ಬರೂ ಬೇರೆ ಬೇರೆ ತಾಯಿಯ ಮಕ್ಕಳು. ಲಕ್ಷ್ಮಣನು ಅಣ್ಣನಾದ ಬಲದೇವನ ಸಹಾಯದಿಂದ ಪ್ರತಿವಾಸುದೇವನೆನಿಸಿದ ರಾವಣನನ್ನು ಕೊಲ್ಲುವನು. ಲಕ್ಷ್ಮಣನು ದಿಗ್ವಿಜಯದಿಂದ ತ್ರಿಖಂಡಾಧಿಪತಿಯಾಗಿ ಚಕ್ರವರ್ತಿಯಾಗುವನು. ಲಕ್ಷ್ಮಣನಿಗೆ ಮರಣಾಂತರ ರಾವಣನ ವಧೆಯ ಫಲವಾಗಿ ನರಕ ಪ್ರಾಪ್ತಿಯಾಗುವುದು. ತಮ್ಮನ ಮರಣದಿಂದ ವ್ಯಾಕುಲನಾದ ರಾಮನು ಜಿನದೀಕ್ಷೆಯನ್ನು ಸ್ವೀಕರಿಸಿ ಮೋಕ್ಷವನ್ನು ಪಡೆಯುವನು. ಜೈನರಾಮಾಯಣದ ಕರ್ತೃಗಳಿಗೆ ವಾಲ್ಮೀಕಿ ರಾಮಾಯಣದ ಪರಿಚಯವಿದ್ದುದು ಸ್ಪಷ್ಟವಾಗಿದ್ದರೂ, ಅವರು ಪ್ರತ್ಯೇಕ ಸಂಪ್ರದಾಯವನ್ನೇ ಬೆಳಸಿಕೊಂಡುಬಂದರು.

ವಾಲ್ಮೀಕಿಯ ಸಂಪ್ರದಾಯವನ್ನೇ ಅನುಸರಿಸಿ ಅದನ್ನು ಭಿನ್ನ ಭಿನ್ನ ದೃಷ್ಟಿಯಿಂದ ಮಾರ್ಪಡಿಸಿದವರು ಅನೇಕರಿದ್ದಾರೆ ಅಂತಹವರ ಕೃತಿಗಳಲ್ಲಿ ಸಂಸ್ಕೃತದ 'ಅಧ್ಯಾತ್ಮರಾಮಾಯಣ' ಮೊತ್ತಮೊದಲನೆಯದು. ಅದರ ಕಾಲವಾಗಲಿ ಕರ್ತೃವಾಗಲಿ ತಿಳಿಯದು. ಕ್ರಿಸ್ತಶಕದ ಆದಿ ಶತಮಾನವಿದ್ದಿರಬಹುದು. 'ಅಧ್ಯಾತ್ಮರಾಮಾಯಣ' ಒಂದು ರೀತಿಯ ಪುರಾಣಕಾವ್ಯ. ರಾಮನ ಅವತಾರ ಮಹಾತ್ಮ್ಯವನ್ನು ಪ್ರದರ್ಶಿಸುವುದೇ ಅದರ ಪ್ರಧಾನ ಧ್ಯೇಯ. ವಾಲ್ಮೀಕಿ ರಾಮಾಯಣವು ಇತಿಹಾಸವಾದರೆ, ಇದು ಪುರಾಣ. ರಾಮನ ಚರಿತ್ರೆಯನ್ನೂ ವಿವರಿಸುತ್ತಿರುವಾಗಲೇ ಸಾಧ್ಯವಾದೆಡೆಗಳಲ್ಲೆಲ್ಲ ಅಧ್ಯಾತ್ಮತತ್ತ್ವಗಳ ವಿವರಣೆಯನ್ನು ನಿರೂಪಿಸುತ್ತದೆ. ಇದು ಪಾರ್ವತೀ ಪರಮೇಶ್ವರರ ಸಂವಾದ ರೂಪದಲ್ಲಿದೆ. ಇವನು ಶ್ರೀರಾಮನಿಂದಲೇ ಪ್ರತ್ಯಕ್ಷವಾಗಿ ಕೇಳಿದ ರಾಮಚರಿತ್ರೆಯನ್ನು ಪಾರ್ವತಿಗೆ ತಿಳಿಸುತ್ತಾನೆ. ವಾಲ್ಮೀಕಿ ರಾಮಾಯಣದ ನಾಯಕನಾದ ರಾಮನು ಆದರ್ಶಮಾನವನಾದರೆ ಇಲ್ಲಿಯ ರಾಮ ಅವತಾರಪುರುಷ, ಮಾಯಾ ಮಾನವ. ಬ್ರಹ್ಮನ ಪ್ರಾರ್ಥನೆಯ ಪ್ರಕಾರ ಭೂಭಾರ ಪರಿಹರಣಕ್ಕಾಗಿ–ರಾವಣನ

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹ ದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆ ಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ.

ಸಂಹಾರಕ್ಕಾಗಿ ಭೂಲೋಕದಲ್ಲಿ ಅವತರಿಸಿದ್ದಾನೆ. ಇಲ್ಲಿ ಅವನು ನಡೆಸುವ ಕಾರ್ಯವೆಲ್ಲ ನಟನೆ ಮಾತ್ರ, ಅವನು ಸರ್ವಾಂತರ್ಯಾಮಿ. ಆದಿ ಪುರುಷ, ಸೃಷ್ಟಿಸ್ಥಿತಿಲಯಗಳಿಗೆ ಅಧಿಕಾರಿ, ಸಂಸಾರವೆಲ್ಲ ಮಾಯೆ. ಅವನ ಸ್ವರೂಪವನ್ನು ತಿಳಿ ಯುವುದರಿಂದ ಶಾಶ್ವತವಾದ ವಿಷ್ಣು ಸಾಯುಜ್ಯ ದೊರೆಯುತ್ತದೆ. ಅವನು ಅವತಾರ ಪುರುಷ ನೆಂಬುದು ಅವನಿಗೂ ಗೊತ್ತು. ಅವನನ್ನು ಕಂಡ ವರೆಲ್ಲ ಅವನ ಪರತತ್ತ್ವವನ್ನು ಅವತಾರರಹಸ್ಯ ವನ್ನು ಅವನಿಗೆ ತಿಳಿಸಿ ಅವನಿಂದ ಉಪದೇಶ ವನ್ನು ಪಡೆಯುತ್ತಾರೆ.

ಅವನ ಪರಿವಾರದವರೂ ಅಂತಹವರೇ. ಲಕ್ಷ್ಮ ಣನು ಆದಿಶೇಷನ ಅವತಾರ. ಭರತ ಶತ್ರುಘ್ನರು ಶಂಖ ಚಕ್ರಾಂಶದಿಂದ ಉತ್ಪನ್ನರಾದವರು. ಸೀತಾ ದೇವಿಯು ಆದಿಮಾಯೆ. ಅವಳು ಎಂದೂ ತಪ್ಪು ಮಾಡುವವಳಲ್ಲ ಯಾರಿಂದಲೂ ಅವಮಾನಿ ತಳಾಗುವುದಕ್ಕೆ ಸಾಧ್ಯವಿಲ್ಲದವಳು. ಲೋಕ ಸಂರಕ್ಷಣಾರ್ಥವಾಗಿ ಕಷ್ಟ ಸಂಭವಿಸಿದಾಗಲೆಲ್ಲ ತನ್ನ ಮಾಯಾಶಕ್ತಿಯಿಂದ ಪರಿಹರಿಸುತ್ತಾಳೆ.

ಮಹರ್ಷಿಗಳನೇಕರು ಸೂಕ್ತಕಾಲದಲ್ಲಿ ರಾಮ ನಿಗೆ ಅವನ ಅವತಾರ ರಹಸ್ಯವನ್ನು ಪೂರ್ವ ಭಾವಿಯಾಗಿ ತಿಳಿಯಪಡಿಸಿ ಅವನ ಸಂಕಲ್ಪ ಸಾಧನೆಯಲ್ಲಿ ಸಹಾಯ ಮಾಡುವರು. ಅವನಿಗೆ ಪ್ರತಿಕಕ್ಷಿಗಳಾದವರೂ ಅವನ ಕಾರ್ಯಸಾಧನೆ ಗಾಗಿಯೇ ದೈವದಿಂದ ಪ್ರೇರಿತರಾಗಿ ವಿಘ್ನವ ನ್ನುಂಟುಮಾಡಿ ಅವನ ಅವತಾರ ರಹಸ್ಯವನ್ನು ತಿಳಿದು, ಸದಾ ವಿರೋಧ ದೃಷ್ಟಿಯಿಂದಲೇ ಅವ ನನ್ನು ನೆನೆಯುತ್ತ ಅವನ ಮೂಲಕವೇ ತಮ್ಮ ಸದ್ಗತಿಯನ್ನು ಪಡೆಯುತ್ತಾರೆ.

ಇದರಿಂದ ಈ ಕಾವ್ಯದ ಸ್ವರೂಪ, ದೃಷ್ಟಿ, ಧ್ಯೇಯ, ಧೋರಣೆ, ಪಾತ್ರ ಚಿತ್ರಣ, ಸನ್ನಿವೇಶ ಕಲ್ಪನೆ ಎಲ್ಲವೂ ಮಾರ್ಪಾಟಾಗಿದೆ. ಎಲ್ಲವೂ, ಎಲ್ಲರೂ ಎರಕಹೊಯ್ದ ಹಾಗಾಗಿ ಬಿಟ್ಟಿವೆ. ಆದಿ ಕವಿಯ ಮಾನವೀಯತೆ ಮಾಯವಾಗಿದೆ. ಆದ ರ್ಶ ಅನುಕರಣೆಗೆ ಅಸಾಧ್ಯವಾಗಿದೆ. ಪಾತ್ರಗಳಲ್ಲಿ ಬೆಳವಣಿಗೆಯಿಲ್ಲದುದರಿಂದ ಯಾವ ವಾಚಕನ ಅನುಕಂಪೆಗೂ ಅನುಕರಣೆಗೂ ಪಾತ್ರವಾಗುವು ದಿಲ್ಲ. ನಾಯಕನಾದ ರಾಮನ ಪಾತ್ರವನ್ನೇ ನೋಡಬಹುದು. ಅವನ ಕಾರ್ಯವೆಲ್ಲ ಕೇವಲ ನಟನೆಯಾಗಿರುವುದರಿಂದ ಅವನ ಆದರ್ಶ ಯಾವ ವಾಚಕರಿಗೂ ಮಾರ್ಗದರ್ಶಕವಾಗಿರಲು ಸಾಧ್ಯ ವಿಲ್ಲ. ಹಾಗೆಯೇ ಮೂಲಕಾವ್ಯದಲ್ಲಿ ಪ್ರದರ್ಶಿತ ವಾಗಿರುವ ಯಾವ ದೌರ್ಬಲ್ಯಗಳನ್ನೂ ಇಲ್ಲಿ ಕಾಣಲಾಗುವುದಿಲ್ಲ. ಇಲ್ಲಿ ಯಾವ ವ್ಯಕ್ತಿ

(35 ನೇ ಪುಟ ನೋಡಿ)

# ಪ್ರೇಕ್ಷಣೀಯ ಸ್ಥಳ ಚುಂಚನ ಕಟ್ಟೆ

ಸುಮನ ಬದರೀನಾಥ್

ಜುಂಚಾಭಿಧ ಭಕ್ತ ಪಾಲನ
ಕೃಶೇ ತದ್ಭಕ್ತಿ ಸಮ್ಮೋದಿತಃ
ಪ್ರಾದುರ್ಭೂಯ ಕವೇರಜಾಂ
ಪ್ರಮದಯನ್ ಮಧ್ಯೇ
ಹರಿದ್ಮೋದಕವ್ ||

ಪಶ್ಚಾತ್ಸ್ರೋಜ್ವಲ ಪುಷ್ಕರದ್ವಯ
ಭುವಸಾನ್ನಿಧ್ಯ ಮಾಪಾದಯನ್
ಸೀತಾ ಲಕ್ಷ್ಮಣ ಸೇವಿತೋ ವಿಜಯತೇ
ಶ್ರೀರಾಮ ಕಲ್ಪದ್ರುಮಃ ||

ದಕ್ಷಿಣ ದೇಶದ ಗಂಗೆ ಎಂದು ಪ್ರಖ್ಯಾತಳಾದ ಕಾವೇರಿಯ ಪವಿತ್ರ ತಟದಲ್ಲಿರುವ ಅನೇಕ ಪುಣ್ಯಕ್ಷೇತ್ರಗಳಲ್ಲಿ ಚುಂಚನ ಕಟ್ಟೆಯೂ ಒಂದು. ಇಲ್ಲಿ ಲೋಕಾಭಿರಾಮನಾದ ಶ್ರೀರಾಮಚಂದ್ರಸ್ವಾಮಿ ಭಕ್ತ ಜನರ ಅಭೀಷ್ಟಗಳನ್ನು ಅನುಗ್ರಹಿಸುತ್ತಾ ನೆಲೆಸಿದ್ದಾನೆ.

ಚುಂಚನ ಕಟ್ಟೆ ಬಹು ಸುಂದರವಾದ ಸ್ಥಳ. ದೇವಸ್ಥಾನದ ಸುತ್ತಲೂ ಪವಿತ್ರ ಪ್ರಶಾಂತ ವಾತಾವರಣ. ಕಣ್ಣೋಟ ಹರಿಯುವ ತನಕ ಪಸರಿಸಿರುವ ಪೈರುಪಚ್ಚೆಗಳ ಕಣ್ ತಣಿಸುವ ಹಸಿರುಬಣ್ಣ. ಶ್ರೀರಾಮಚಂದ್ರನ ಸೇವೆಗೆ ಭಕ್ತ ಜನರನ್ನು ಕೂಗಿ ಕರೆಯುತ್ತಿರುವಳೋ ಎನ್ನುವಂತೆ ಮಂಜುಳ ರವಗೈಯ್ಯುತ್ತಾ ಹರಿಯುತ್ತಿರುವ ಕಾವೇರಿ. ಚುಂಚನಕಟ್ಟೆ ಮೈಸೂರು ಜಿಲ್ಲೆಯ ಕೃಷ್ಣರಾಜನಗರ ತಾಲ್ಲೂಕಿನಲ್ಲಿದೆ. ಮೈಸೂರಿನಿಂದ 12 ಮೈಲಿಗಳ ದೂರದಲ್ಲಿದೆ. ಮೈಸೂರಿನಿಂದ ನೇರವಾಗಿಯೂ ಕೃಷ್ಣರಾಜನಗರದಿಂದಲೂ ಅನೇಕ ಬಸ್ಸುಗಳು ಹೋಗುತ್ತವೆ. ರೈಲಿನಲ್ಲಿ ಹೋಗ ಬಯಸುವವರು, ಕೃಷ್ಣರಾಜ ನಗರದಲ್ಲಿ ಇಳಿದು ನಂತರ ಬಸ್ಸಿನಲ್ಲಿ ಹೋಗಬೇಕು. ಶ್ರೀರಾಮಚಂದ್ರನು ಸರ್ವಜನ ಸುಲಭನೆಂಬಂತೆ ಇಲ್ಲಿಗೆ ಬರುವ ಮಾರ್ಗವು ಬಹು ಸುಗಮ.

ಬಸ್ ಸ್ಟ್ಯಾಂಡ್ ನಿಂದ ನೇರವಾದ ರಸ್ತೆಯಲ್ಲಿ ಬಂದರೆ ಎಡ ಭಾಗದಲ್ಲಿ ಎತ್ತರವಾದ ಪ್ರದೇಶದಲ್ಲಿ ದೇವಸ್ಥಾನವಿದೆ. ದೇವಸ್ಥಾನದ ಹಿಂಬದಿಯನ್ನು ಬಳಸಿ ಕಾವೇರೀನದಿ ಬಂಡೆಗಳೆಡೆಯಲ್ಲಿ ಸುಳಿ ಧುಮುಕಿ ಪುಟ್ಟ ಜಲಪಾತವೊಂದನ್ನು ರಚಿಸಿ ಹರಿಯುತ್ತದೆ. ಸುಮಾರು ಎತ್ತರವಿರುವ ಈ ಜಲಪಾತದ ಸುತ್ತ ಮುತ್ತಲಿನ ಪ್ರಕೃತಿ ಸೌಂದರ್ಯವನ್ನು ಕುಳಿತು ಸವಿಯಲು ಯಾತ್ರಿಕರಿಗೆ ಅನುಕೂಲವಾಗುವಂತೆ ದೇವಸ್ಥಾನದ ಹಿಂಬದಿಯಲ್ಲಿ ಕಲ್ಲುಬೆಂಚುಗಳಿವೆ. ದೇವಸ್ಥಾನದ ಮುಂದುಗಡೆಯಿಂದ ಇಳಿದು ಒಂದರೆ ಹತ್ತಿರದಲ್ಲಿಯೆ ಸ್ನಾನ ಘಟ್ಟವಿದೆ. ಕಾವೇರಿ ಇಲ್ಲಿ ಪೂರ್ವವಾಹಿನಿಯಾಗಿ ಹರಿಯುತ್ತಾಳೆ. ನದಿಯಲ್ಲಿ ಮಿಂದು ಬಳಿಯಲ್ಲೆ ಇರುವ ಆಂಜನೇಯನ ದರ್ಶನ ಮಾಡಿ ಮೇಲೇರಿದರೆ ಅಲ್ಲೇ ಕಂಗೊಳಿಸುತ್ತದೆ ಶ್ರೀರಾಮಚಂದ್ರನ ದೇವಸ್ಥಾನ.

ಈ ದೇವಸ್ಥಾನಕ್ಕೆ ಬಹು ಪ್ರಾಚೀನವಾದ ಇತಿಹಾಸವಿದೆ. ಆದರ ವಿವರಗಳು ಉಪಲಬ್ಧವಿಲ್ಲ. ಈಗಿನ ದೇವಸ್ಥಾನದ ಕಟ್ಟಡ, ಮಹಾದ್ವಾರಗಳೂ, ಧ್ವಜಸ್ತಂಭಗಳೂ, ದೈವಭಕ್ತರೂ ಹಿಂದೂ ಮತೋದ್ಧಾರಕರೂ ಆಗಿದ್ದ ಮೈಸೂರು ಒಡೆಯರಾದ 'ನರಪತಿ ಬಿರುದೆಂತೆಂಬರಗಂಡ' ಚಾಮರಾಜ ಒಡೆಯರ್ ಮತ್ತು ಕೃಷ್ಣರಾಜ ಒಡೆಯರವರಿಂದ ಕಟ್ಟಲ್ಪಟ್ಟವು. ದೇವಸ್ಥಾನ ಚಿಕ್ಕದಾದರೂ ಚೊಕ್ಕವಾದ ಗುಡಿ. ಗುಡಿಯ ಸುತ್ತಲಿನ ಹೊರ ಪ್ರಾಕಾರದಲ್ಲಿ ಸರ್ವ ವಿಘ್ನಹಾರಕನಾದ ಗಣಪತಿಯ ವಿಗ್ರಹವಿದೆ. ಒಳಪ್ರಾಕಾರದಲ್ಲಿ ದಶಾವತಾರದ ಸುಂದರ ಚಿತ್ರಗಳೂ ಯಾಗಶಾಲೆಗಳೂ ಇವೆ. ಗರ್ಭಗುಡಿಯ ಮುಂದಿನ ಕೈಸಾಲೆಯಲ್ಲಿ ಶ್ರೀರಾಮಭಕ್ತರಾಗಿದ್ದ ಜುಂಚ ಜುಂಚಿಯುರ ಪುಟ್ಟ ವಿಗ್ರಹಗಳಿವೆ.. ಕೈಸಾಲೆಯನ್ನು ದಾಟಿ ಒಳಹೊಕ್ಕರೆ ಒಂದು ಅಂಕಣ ನಂತರ ಗರ್ಭಗುಡಿ.

ಬಲಗೈಯಲ್ಲಿ ಬಾಣವನ್ನೂ. ಎಡಗೈಯಲ್ಲಿ ಬಿಲ್ಲನ್ನೂ ಧರಿಸಿ ಬಲಭಾಗದಲ್ಲಿ ಸೀತಾದೇವಿಯಿಂದಲೂ, ಎಡಭಾಗದಲ್ಲಿ ಲಕ್ಷ್ಮಣನಿಂದಲೂ ಭೂಷಿತನಾದ ಶ್ರೀ ಕೋದಂಡ ರಾಮನ ದಿವ್ಯ ಮಂಗಳ ಮೂರ್ತಿ ಸೌಮ್ಯ ಸುಂದರವಾಗಿದೆ. ಭಕ್ತಿ ಭಾವ ಪ್ರಚೋದಕವಾಗಿದೆ. ಇದು ಚೋಳರ ಕಾಲದ ಶಿಲ್ಪವೆಂದು ಹೇಳಿಕೆಯಿದೆ. ಆಶ್ಚರ್ಯಕರವಾಗಿ ರಾಮ ದೇವರ ಬಳಿ ಆಂಜನೇಯನ ವಿಗ್ರಹವಿಲ್ಲ. ಉತ್ಸವ ಮೂರ್ತಿಗಳೂ ಬಹು ಮುದ್ದಾಗಿವೆ. ಅವು ಕೃಷ್ಣರಾಜನಗರದಲ್ಲಿ ಇಡಲ್ಪಟ್ಟಿದ್ದು ಪ್ರತಿವರ್ಷವೂ ಎರಡು ಬಾರಿ, ಒಮ್ಮೆ ಜನವರಿ ತಿಂಗಳಲ್ಲಿ ಬ್ರಹ್ಮೋತ್ಸವದ ಸಮಯದಲ್ಲೂ ಮತ್ತೊಮ್ಮೆ ಶ್ರಾವಣ ಮಾಸದಲ್ಲಿ ಚಿಕ್ಕ ಜಾತ್ರೆಯ ಸಮಯದಲ್ಲೂ ಪಲ್ಲಕ್ಕಿಯಲ್ಲಿ ತರಲ್ಪಡುತ್ತವೆ. ಹಿಂಬದಿಯಲ್ಲೇ ಹರಿಯುತ್ತಿದ್ದರೂ ಕಾವೇರಿಯ ಸದ್ದು ಗರ್ಭಗುಡಿಯಲ್ಲಿ ಕಿಂಚಿತ್ತೂ ಕೇಳಿಸುವುದಿಲ್ಲ, ಕಾವೇರಿಯ ನಿರಂತರ ಶಬ್ದದಿಂದ ಕುಪಿತಗೊಂಡು 'ಹೆಣ್ಣಿಗೆ ಇಷ್ಟುನಾಲಗೆ ಇರಬಾರದು' ಎಂದು ಶಾಪವನ್ನು ಶ್ರೀರಾಮಚಂದ್ರಸ್ವಾಮಿ ಕೊಟ್ಟನಂತೆ. ಕಾವೇರೀಸ್ನಾನದಿಂದ ಪರಿಶುದ್ಧಗೊಂಡ ಮೈಮನಗಳು ದೇವರ ಮಂಗಳಕರ ಸಾನ್ನಿಧ್ಯದಲ್ಲಿ ಭವ್ಯತೆಗೇರುತ್ತವೆ.

ಪೂರ್ವದಲ್ಲಿ ಈ ಸ್ಥಳವು ಚುಂಚುವನವೆಂದು ಕರೆಯಲ್ಪಡುತ್ತಿತ್ತು, ತೃಣಬಿಂದು ಎಂಬ ಮಹರ್ಷಿಯು, ಕಾವೇರೀ ನದಿಯ ಕೀರ್ತಿಯಿಂದ ಆಕರ್ಷಿತನಾಗಿ ಸ್ನಾನಾಪೇಕ್ಷೆಯಿಂದ ಅವಳನ್ನರಸುತ್ತಾ ಇಲ್ಲಿಗೆ ಬಂದ

( 30ನೇ ಪುಟ ನೋಡಿ )



ಕೈಕೇಯಿ, ಕೌಸಲ್ಯೆ, ಸುಮಿತ್ರೆ – ತಮ್ಮ ಮಕ್ಕಳೊಂದಿಗೆ

# ಶಿಲ್ಪ ರಾಮಾಯಣ

ಯಾಗ ಪರಿರಕ್ಷಣೆ



ಭಾರತೀಯ ಜೀವನದ ಎಲ್ಲ ಅಂಗಗಳೂ ಅದರ ಮೂಲಧರ್ಮವಾದ ಹಿಂದೂಧರ್ಮ ದಿಂದ–ಅದರ ಕಾವ್ಯಗಳಾದ ರಾಮಾಯಣ ಮಹಾಭಾರತಗಳಿಂದ ಪ್ರಭಾವಿತವಾಗಿ ಒಂದೊಂದು ಯುಗದಲ್ಲೂ ಹೊಸ ಹೊಸ ಸ್ಫೂರ್ತಿಯನ್ನು ಪಡೆದು ಜನ ಜೀವನದ ವಿವಿಧರಂಗಗಳಲ್ಲಿ ವಿಧ ವಿಧವಾಗಿ ಪ್ರಕಟ ವಾಗಿವೆ. ಲಲಿತ ಕಲೆಗಳ ರಂಗದಲ್ಲಿಯಂತೂ ರಾಮಾಯಣ ಮಹಾಭಾರತಗಳ ಪ್ರಭಾವ ಬಹುಸ್ಪಷ್ಟ. ಆದಿಕವಿ ವಾಲ್ಮೀಕಿಯ ರಾಮಾಯಣದ ಅನೇಕ ಪ್ರಸಂಗಗಳನ್ನು ಶಿಲ್ಪಿಗಳು ಕಲ್ಲಿನಲ್ಲಿ ಮೂಡಿಸಿ ರಾಮಾಯ ಣವನ್ನು ಮುಟ್ಟಿ ನೋಡಲು ಅನುವು ಮಾಡಿ ಕೊಟ್ಟಿದ್ದಾರೆ. ರಾಮಾಯಣದ ಹಲವು ಪ್ರಸಂಗಗಳ ಶಿಲ್ಪಗಳ ಚಿತ್ರಗಳನ್ನು ಇಲ್ಲಿ ಶಿಲ್ಪ ರಾಮಾಯಣದಲ್ಲಿ ನೀಡಲಾಗಿದೆ.

ದಶರಥ ಕೋಸಲದ ಚಕ್ರವರ್ತಿ. ಆತ ನಿಗೆ ಮೂವರು ರಾಣಿಯರು. ಬಹುಕಾಲ ಮಕ್ಕಳಾಗದಿರಲು ಆತ ಪುತ್ರಕಾಮೇಷ್ಟಿ ಯಾಗ ಮಾಡಿದ. ತತ್ಫಲವಾಗಿ ನಾಲ್ಕು ಮಂದಿ ಮಕ್ಕಳಾದರು. ಅವರುಗಳೇ ಶ್ರೀರಾಮ ಭರತ ಲಕ್ಷ್ಮಣ ಶತ್ರುಘ್ನರು. ಚಿತ್ರದಲ್ಲಿ ಕೈಕೇಯಿ ಕೌಸಲ್ಯಾ ಸುಮಿತ್ರೆ ಯರು ತಮ್ಮ ಮಕ್ಕಳನ್ನು ತಮ್ಮ ಮಡಿಲಿ ನಲ್ಲಿಟ್ಟುಕೊಂಡು ಕುಳಿತಿದ್ದಾರೆ.

ಈ ಶಿಲ್ಪ ತಾಡಪತ್ರಿಯ ಶ್ರೀವೆಂಕಟೇ ಶ್ವರ ದೇವಾಲಯದಲ್ಲಿದೆ.

ಬಾಲಕರು ಬೆಳೆದು ದೊಡ್ಡವರಾಗುತ್ತಿ ರಲು ಒಂದೊಮ್ಮೆ ವಿಶ್ವಾಮಿತ್ರ ಮಹರ್ಷಿ ದಶರಥನಲ್ಲಿಗೆ ಬಂದು ತಾನು ಮಾಡುತ್ತಿರುವ ಯಾಗಕ್ಕೆ ಮಾರೀಚ ಸುಬಾಹು ಮೊದಲಾದ ರಾಕ್ಷಸರಿಂದ ವಿಘ್ನಗಳು ಉಂಟಾಗುತ್ತಿದೆ ಯೆಂದೂ, ಈ ವಿಘ್ನ ಪರಿಹಾರ ಮಾಡಲು ರಾಮಲಕ್ಷ್ಮಣರಿಬ್ಬರನ್ನು ಕಳುಹಿಸ ಬೇಕೆಂದೂ ಬೇಡಿದ. ದಶರಥ ಪುತ್ರಪ್ರೇಮ ದಿಂದ ಹಿಂಜರಿದರೂ, ವಶಿಷ್ಠರ ಧೈರ್ಯ

ಚಿತ್ರ, ನಿರೂಪಣೆ :

**ಶ್ರೀ ಸಿ. ಕೃಷ್ಣಮೂರ್ತಿ, ಎಂ.ಎ.**

ವಾಕ್ಯವನ್ನು ಕೇಳಿ ರಾಮ ಲಕ್ಷ್ಮಣರನ್ನು ವಿಶ್ವಾಮಿತ್ರನೊಂದಿಗೆ ಕಳುಹಿಸಿಕೊಟ್ಟ. ವಿಶ್ವಾಮಿತ್ರನು ರಾಮಲಕ್ಷ್ಮಣರಿಗೆ ಅನೇಕ ಹೊಸ ಹೊಸ ಶಸ್ತ್ರಾಸ್ತ್ರ ಪ್ರಯೋಗ ಉಪ ಸಂಹಾರಗಳನ್ನು ಹೇಳಿಕೊಟ್ಟ. ನಂತರ ವಿಶ್ವಾಮಿತ್ರ ಮಾಡುತ್ತಿದ್ದ ಯಜ್ಞವನ್ನು ರಾಮ ಲಕ್ಷ್ಮಣರು ಪರಿರಕ್ಷಿಸಿದರು. ಚಿತ್ರದಲ್ಲಿ ವಿಶ್ವಾಮಿತ್ರ ಯಜ್ಞ ಮಾಡುತ್ತಿರುವಿಕೆ, ಆಕಾಶದಲ್ಲಿ ರಾಕ್ಷಸ ಕೋಲಾಹಲ. ಶ್ರೀರಾಮಚಂದ್ರನು ಧನುರ್ಧಾರಿಯಾಗಿ ರಾಕ್ಷಸರನ್ನು ಗುರಿಯಾಗಿಸಿ ಶರಪ್ರಯೋಗ ಮಾಡುತ್ತಿರುವುದನ್ನು ಕಾಣಬಹುದು,

ಈ ಶಿಲ್ಪ ತಾಡಪತ್ರಿಯ ಚಿಂತಲ ರಾಯಸ್ವಾಮಿ ದೇವಾಲಯದಲ್ಲಿದೆ.

ಸೀತಾ ಸ್ವಯಂವರದ ನಂತರ ಶ್ರೀರಾಮ ಸೀತಾ ಲಕ್ಷ್ಮಣರು ವನವಾಸಿಗಳಾದರು, ಕೈಕೇಯಿಯ ಭರತ ಪಟ್ಟಾಭಿಷೇಕಾಸಕ್ತಿಯ ಫಲವಾಗಿ. ವನವಾಸದಲ್ಲಿದ್ದಾಗ್ಗ ಲಂಕಾಧಿಪತಿ ರಾವಣ ಸೀತಾಪಹರಣ ಮಾಡಿದ. ಸೀತೆಯನ್ನು ಹುಡುಕುತ್ತ ಬಂದ ರಾಮಲಕ್ಷ್ಮಣರಿಗೆ ಸುಗ್ರೀವ ಸಖ್ಯವಾಯಿತು. ಸುಗ್ರೀವ ಶ್ರೀರಾಮರು ಸಮಾನ ದುಃಖಿಗಳು. ಸುಗ್ರೀವನ ಜೀವನದಲ್ಲಿ ವಾಲಿ ಸೋದರನಾದರೂ ಶತ್ರು ಸಮ. ಅವನನ್ನು ಕೊಲ್ಲಲು ತಾನು ಸಹಾಯ ಮಾಡುವೆನೆಂದ ರಾಮ. ವಾಲಿಯ ಶೌರ್ಯ ಅಸದಳವಾದದ್ದು. ತಾನೂ ಅಸಹಾಯ ಶೂರ ಎಂಬುದನ್ನು ಸುಗ್ರೀವನಿಗೆ ಮನವರಿಕೆಮಾಡಿ ಕೊಡಲು ಶ್ರೀರಾಮ ಸಪ್ತತಾಳ ಭಂಜನ ಮಾಡುವನು.

ಸಪ್ತತಾಳ ಭಂಜನ



ವಾಲಿ ವಧೆ

ಚಿತ್ರದಲ್ಲಿ ಶ್ರೀರಾಮನು ಸಪ್ತತಾಳ ಭಂಜನ ಕಾರ್ಯದಲ್ಲಿ ತೊಡಗಿರುವುದನ್ನು ಕಾಣಬಹುದು. ದುಂದುಭಿಯ ಅಸ್ಥಿಪಂಜರವೂ ಇರುವ ಈ ಶಿಲ್ಪ ವಿಜಯನಗರ ಕಾಲದ್ದು. ಹಂಪೆಯ ಹಜಾರ ರಾಮಸ್ವಾಮಿ ದೇವಾಲಯ, ತಿರುಪತಿಯ ಗೋವಿಂದರಾಜ ಸ್ವಾಮಿ ದೇವಾಲಯಗಳಲ್ಲಿ ಈ ಶಿಲ್ಪವಿದೆ.

ಶ್ರೀರಾಮ ಸುಗ್ರೀವರ ಮೈತ್ರಿಯ ಪ್ರಥಮ ಘಟ್ಟದಲ್ಲಿ ವಾಲಿವಧೆ ನಡೆಯುತ್ತದೆ. ಸುಗ್ರೀವನು ತನ್ನ ಅಣ್ಣನಾದ ವಾಲಿಯನ್ನು ದ್ವಂದ್ವಯುದ್ಧಕ್ಕೆ ಕರೆಯುತ್ತಾನೆ. ಅವರಿಬ್ಬರೂ ಯುದ್ಧ ಮಾಡುತ್ತಿರುವಾಗ ಶ್ರೀರಾಮ ವಾಲಿಯನ್ನು ಬಾಣ ಪ್ರಯೋಗದಿಂದ ಕೊಲ್ಲುವನು.

ಚಿತ್ರದಲ್ಲಿ ಒಂದು ಕಡೆ ವಾಲಿ ಸುಗ್ರೀವರ ಕಾಳಗ, ಹಿಂದೆ ಶ್ರೀರಾಮ ಬಿಲ್ಲು ಹಿಡಿದು ಬಾಣ ಪ್ರಯೋಗ ಮಾಡುವುದನ್ನು ಕಾಣಬಹುದು. ಈ ಶಿಲ್ಪವನ್ನು ಬಹುತೇಕ ವೈಷ್ಣವ ಆಲಯಗಳಲ್ಲಿ ಕಾಣಬಹುದು. ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದ ಪಡಿಕಾವಲಿ ಮಂಟಪದ ಕಂಬದಲ್ಲಿ, ತಿರುಪತಿ ಗೋವಿಂದ ರಾಜಸ್ವಾಮಿ ದೇವಾಲಯದಲ್ಲಿ ಅನೇಕ ಕಡೆ, ತಾಡಪತ್ರಿ, ಚಂದ್ರಗಿರಿ ದೇವಾಲಯಗಳಲ್ಲಿ ಕಾಣಬಹುದು.

ವಾಲಿವಧೆಯನಂತರ ಸುಗ್ರೀವ ಕಿಷ್ಕಿಂಧೆಯ ರಾಜನಾಗಿ ತನ್ನ ವಾನರ ಸೈನ್ಯವನ್ನು ಸೀತಾ ಪರಿಶೋಧನಕ್ಕೆ ಕಳುಹಿಸುವನು. ರಾವಣನ ಲಂಕೆಯನ್ನು ಸೇರಿದ ಹನುಮಂತನು ಸೀತೆಯನ್ನು ಅಶೋಕವನದಲ್ಲಿ ಕಂಡು ಆಕೆಗೆ ಶ್ರೀರಾಮಚಂದ್ರನ ಸುದ್ದಿಯನ್ನು ತಿಳಿಸಿ, ರಾಮನ ಮುದ್ರಿಕೆಯನ್ನು ಆಕೆಗೆ ಗುರುತಿಗಾಗಿ ನೀಡಿ, ಆಕೆಯಿಂದ ಶ್ರೀರಾಮನಿಗೆ ತಲುಪಿಸಲು ಚೂಡಾಮಣಿಯನ್ನು ಪಡೆಯುವನು.

ಈ ಶಿಲ್ಪವನ್ನು ತಾಡಪತ್ರಿಯ ಶ್ರೀವೆಂಕಟೇಶ್ವರ ಆಲಯದಲ್ಲಿ ಕಾಣಬಹುದು. ಬಹುತೇಕ ಎಲ್ಲ ವೈಷ್ಣವ ಆಲಯಗಳಲ್ಲೂ ಸಾಮಾನ್ಯವಾಗಿ ಈ ಶಿಲ್ಪವನ್ನು ಕಾಣಬಹುದು.

ಸೀತೆಯನ್ನು ಕಂಡು ಆಕೆಯಿಂದ ಚೂಡಾಮಣಿಯನ್ನು ಪಡೆದು ತ್ವರೆಯಾಗಿ ಶ್ರೀರಾಮಚಂದ್ರನನ್ನೂ ವಾನರ ಸೈನ್ಯವನ್ನೂ ಕರೆತರುವೆನೆಂದು ಹೇಳಿ ಹಿಂದಿರುಗುತ್ತ ಹನುಮ ರಾವಣನ ಸೇನಾ ಬಲದ ಅಂದಾಜು ತಿಳಿಯಲು ಗದ್ದಲವನ್ನುಂಟು ಮಾಡಿ ಬಂಧನಕ್ಕೆ ಒಳಗಾಗುವನು. ಶ್ರೀರಾಮದೂತನಂತೆ ರಾವಣನನ್ನು ಮಾತನಾಡಿಸಿ ಅವನಿಗೆ ಶ್ರೀರಾಮನ ಪರಾಕ್ರಮ, ಶಕ್ತಿ ಸಾಮರ್ಥ್ಯಗಳನ್ನು ವಿವರಿಸಿ, ಸೀತೆ



ಹನುಮಂತನ ಸೀತಾ ಸಂದರ್ಶನ

ಯನ್ನು ಶ್ರೀರಾಮನಿಗೆ ಒಪ್ಪಿಸಿ ಕ್ಷಮೆ ಕೇಳ ಬೇಕೆಂದು ಸಲಹೆ ನೀಡುವನು.

ಚಿತ್ರದಲ್ಲಿ ರಾವಣ ಹನುಮಂತ ಸಂವಾದವನ್ನು ಕಾಣಬಹುದು. ಈ ಶಿಲ್ಪ ತಾಡಪತ್ರಿಯ ಶ್ರೀ ವೆಂಕಟೇಶ್ವರ ಆಲಯದಲ್ಲಿ ಇದೆ. ಅನೇಕ ವೈಷ್ಣವಾಲಯಗಳಲ್ಲೂ ಇದನ್ನು ನೋಡಬಹುದು.

ಶ್ರೀರಾಮಚಂದ್ರ ಹನುಮಂತನಿಂದ ಸೀತೆಯ ಇರವನ್ನು ತಿಳಿದು ವಾನರ ಸೇನಾ ಸಮೇತನಾಗಿ ಬಂದು, ಸಮುದ್ರಕ್ಕೆ ಸೇತುವೆಯನ್ನು ನಿರ್ಮಿಸಿ ಲಂಕೆಯನ್ನು ಸೇರಿ, ರಾವಣ ಕುಂಭಕರ್ಣರನ್ನು ಕೊಂದು ವಿಭೀಷಣನಿಗೆ ಲಂಕಾಭಿಷೇಕ ಮಾಡಿ ಸೀತೆಯನ್ನು ಪಡೆದು ಅಯೋಧ್ಯೆಗೆ ಹಿಂದಿರುಗಿ ಪಟ್ಟಾಭಿಷಕ್ತನಾಗುವನು. ಈ ಎಲ್ಲ ಸಂಗತಿಗಳೂ ನಮ್ಮ ಆಲಯಗಳಲ್ಲಿ ಕಲ್ಲಿನಲ್ಲಿ ಕಡೆಯಲ್ಪಟ್ಟಿವೆ; ಎಂದರೆ ರಾಮಾಯಣ ನಮ್ಮ ಶಿಲ್ಪಗಳ ಮೇಲುಂಟು ಮಾಡಿರುವ ಪ್ರಭಾವಕ್ಕೆ ದ್ಯೋತಕ. ★



ಹನುಮಂತ ರಾವಣ ಸಂವಾದ

---

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ.| 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ವಾಲ್ಮೀಕಿಯ ಸುಭಾಷಿತಗಳು

'ರತ್ನಾಕರ' ವೆಂದು ಕರೆಸಿಕೊಳ್ಳುವ ಸಮುದ್ರದ ಮೇಲೆ ಕಾಣುವುದೆಲ್ಲ ಹಗುರ ಮತ್ತು ಅಲ್ಪ ಪದಾರ್ಥಗಳೇ. ಅಮೂಲ್ಯವಾದ ಶ್ರೇಷ್ಠ ರತ್ನಗಳು ಆಳದಲ್ಲಿ ಅಡಗಿರುತ್ತವೆ. ಭಾರವಾದವು ಸಮುದ್ರದ ತಳದಲ್ಲಿರುವುದರಿಂದ ಒಮ್ಮೆಲೇ ಕಾಣವು. ಶ್ರೀ ವಾಲ್ಮೀಕಿ ರಾಮಾಯಣದಂತಹ ಮೇರು ಕೃತಿಯಲ್ಲಿಯೂ ಸಹ ಅಡಗಿರುವ ತತ್ತ್ವಾರ್ಥಗಳು, ವಿಚಾರಗಳು ಅಪೂರ್ವ ಹಾಗೂ ಅಮೂಲ್ಯವಾದವು. ರತ್ನಗಳಂತೆ ಶ್ರೇಷ್ಠ ವಿಷಯಗಳು ಇಲ್ಲಿ ತುಂಬಿವೆ. ಎಂಬುದನ್ನು ವಾಲ್ಮೀಕಿಯೇ "ಸಮುದ್ರಮಿವ ರತ್ನಾಢ್ಯಾಂ" ಎಂಬ ಅರ್ಥವತ್ತಾದ ಮಾತಿನಿಂದ ಸೂಚಿಸಿರುವನು.

"ಆದಿಕಾವ್ಯ" ವೆಂಬ ಕೀರ್ತಿಗೆ ಪಾತ್ರವಾದ ರಾಮಾಯಣದ ಪ್ರಾಚೀನತೆಯ ಬಗ್ಗೆ ಬೇರೆ ಹೇಳಬೇಕಾಗಿಲ್ಲ. ಅದರಲ್ಲಿಯ ಅರ್ಥಗಾಂಭೀರ್ಯ, ಸರಳ ಸುಂದರ ಶೈಲಿ, ಎಲ್ಲಕ್ಕೂ ಮಿಗಿಲಾಗಿ ಸಮಾಜ ಸುಧಾರಣೆಗೆ ಮಾರ್ಗದರ್ಶಿಯಾಗಿ ನಿಲ್ಲಬಲ್ಲ ರಾಮ, ಲಕ್ಷ್ಮಣ ಭರತ ಮೊದಲಾದವರ ಆದರ್ಶ ಪಾತ್ರಚಿತ್ರಣ ಹಾಗೂ ನಿತ್ಯನೂತನವೆನಿಸುವ ಹೃದಯಾಂತರಾಳವನ್ನು ತಟ್ಟುವ ಉತ್ತಮ ನುಡಿಮುತ್ತುಗಳು – ಇವೇ ಮುಂತಾದ ಕಾರಣಗಳಿಂದ ರಾಮಾಯಣವು ಅತ್ಯಂತ ಪ್ರಾಚೀನವೆನಿಸಿದ್ದರೂ ಹಿಂದಿನ, ಇಂದಿನ ಹಾಗೂ ಮುಂದಿನ ಎಲ್ಲ ಜನರಿಗೂ ನಿತ್ಯ ನೂತನ ಸ್ಫೂರ್ತಿ ಸೆಲೆ ಎನಿಸಿದೆ.

ರಾಮಾಯಣವನ್ನು ಓದುತ್ತ ಹೋದಂತೆಲ್ಲ ಸುಭಾಷಿತಗಳು ಕಾಣಸಿಗುವುದರಿಂದ ಅವುಗಳನ್ನು ಪಟ್ಟಿ ಮಾಡುತ್ತಾ ಹೋದರೆ ಅವುಗಳ ಮುಂದೆ ನಿಜಕ್ಕೂ ಹನುಮಂತನ ಬಾಲ ಕಿರಿದಾದೀತೆಂದು ಹೇಳಿದರೆ ಅತಿಶಯೋಕ್ತಿ ಆಗಲಿಕ್ಕಿಲ್ಲ. ಲೇಖನ ವಿಸ್ತಾರಭಯಕ್ಕಿಂತಲೂ ಎಲ್ಲ ಸುಭಾಷಿತ ಸಂಗ್ರಹ ಕಾರ್ಯ ಬಹುಶಃ ಅಸಾಧ್ಯವೇ ಆದೀತು. ರಾಮಾಯಣದತ್ತ ಗಮನ ಸೆಳೆಯುವಂತೆ ಮಾಡುವುದೇ ಸ್ಥೂಲಪರಿಚಯದ ಈ ಲೇಖನದ ಉದ್ದೇಶ ಆದ್ದರಿಂದ ಕೆಲವು 'ಸುಭಾಷಿತ'ಗಳನ್ನು ಮಾತ್ರ ಆಯ್ದು ಇಲ್ಲಿ ಅರ್ಥಸಹಿತವಾಗಿ ವಿವರಿಸಲಾಗಿದೆ.

ನಾಯಕನ ಅವಶ್ಯಕತೆ ಹಾಗೂ ಕರ್ತವ್ಯ ;

ಯಥಾ ಹ್ಯಪಾಶಾಃ ಪಶವೋ
ಯಥಾ ಸೇನಾ ಹ್ಯನಾಯಕಾಃ ।
ಏವಂ ಹಿ ಭವಿತಾ ರಾಷ್ಟ್ರಂ
ಯತ್ರ ರಾಜಾ ನ ದೃಶ್ಯತೇ ॥ – ಅಯೋಧ್ಯಾ

ಪಾಲಕನಿಲ್ಲದ ಪಶುಮಂದೆಯಂತೆ ನಾಯಕನಿಲ್ಲದ ಸೇನೆಯಂತೆ ರಾಜನಿಲ್ಲದ ರಾಜ್ಯದ ಗತಿಯೂ ಅರಾಜಕತೆಗೆ ಕಾರಣವಾಗುತ್ತದೆ.

ನೃಶಂಸಂ ಅನೃಶಂಸಂ ವಾ
ಪ್ರಜಾರಕ್ಷಣ ಕಾರಣಾತ್ ।
ಪಾತಕಂ ವಾ ಸದೋಷಂ ವಾ
ಕರ್ತವ್ಯಂ ರಕ್ಷತಾ ಸದಾ ।
ರಾಜ್ಯಭಾರನಿಯುಕ್ತಾನಾಂ
ಏಷ ಧರ್ಮಃ ಸನಾತನಃ ॥ – ಬಾಲ

ಕ್ರೂರವಾಗಲಿ ಅಥವಾ ಇಲ್ಲದಿರಲಿ ಪಾಪವೋ ದೋಷವೋ ರಾಜ್ಯಭಾರದ ಹೊಣೆ ಹೊತ್ತವರು ಪ್ರಜಾರಕ್ಷಣೆಗಾಗಿ ಆವಶ್ಯಕ ಕರ್ತವ್ಯಗಳನ್ನು ಮಾಡಲೇ ಬೇಕು. ದುಷ್ಟ ಶಿಕ್ಷಣೆ, ಶಿಷ್ಟರಕ್ಷಣೆ ಸನಾತನ ಧರ್ಮವಾಗಿದೆ ಸ್ತ್ರೀಯರನ್ನು ಕೊಲ್ಲುವುದು ಸೂಕ್ತವೇ? ಎಂಬ ತಾಟಕಾ ಸಂಹಾರದ ಬಗೆಗಿನ ಪ್ರಶ್ನೆಗೆ ಇದು ಉತ್ತರವಾಗಿದೆ.

ರಾಜಕಾರಣಿಗಳಿಗೆ ಕಿವಿಮಾತು ;

ಸಹಸ್ರಾಣ್ಯಪಿ ಮೂರ್ಖಾಣಾಂ
ಯದ್ಯುಪಾಸ್ತೇ ಮಹೀಪತಿಃ ।
ಅಥವಾಽಪ್ಯಯುತಾನ್ಯೇವ
ನಾಸ್ತಿ ತೇಷು ಸಹಾಯತಾ ॥
– ಅಯೋಧ್ಯಾ

ಸಾವಿರ, ಅಷ್ಟೇ ಏಕೆ ಹತ್ತು ಸಾವಿರ ಮೂರ್ಖರ ಜತೆಗೆ ಸಮಾಲೋಚಿಸಿದರೂ ಅದರಿಂದ ರಾಜನಿಗೆ ಯಾವ ಉಪಯೋಗವೂ ದೊರೆಯದು.

ಏಕೋಽಪ್ಯಮಾತ್ಯೋ ಮೇಧಾವೀ
ಶೂರೋ ದಕ್ಷೋ ವಿಚಕ್ಷಣಃ ।
ರಾಜಾನಂ ರಾಜಮಾತ್ರಂ ವಾ
ಪ್ರಾಪಯೇನ್ಮಹತೀಂ ಶ್ರಿಯಮ್ ॥
– ಅಯೋಧ್ಯಾ

ಮೇಧಾವಿಯೂ ಶೂರನೂ, ದಕ್ಷನೂ, ಕಾರ್ಯಕುಶಲನೂ, ಆದ ಕೇವಲ ಒಬ್ಬ ಮಂತ್ರಿಯಿದ್ದರೂ ಸಾಕು. ಆತ ರಾಜನಿಗೆ ಅಪಾರ ಸಂಪತ್ತು ದೊರೆಯುವಂತೆ ಮಾಡಬಲ್ಲನು.

ನಾಸ್ತಿಕ್ಯಮನೃತಂ ಕ್ರೋಧಂ
ಪ್ರಮಾದಂ ದೀರ್ಘಸೂತ್ರತಾ ।
ಅದರ್ಶನಂ ಜ್ಞಾನವತಾಂ
ಆಲಸ್ಯಂ ಪಂಚವೃತ್ತಿತಾ ।
ಏಕಚಿಂತನ ಮರ್ಥಾನಾಂ
ಅನರ್ಥಜ್ಞೈಶ್ಚ ಮಂತ್ರಣಂ ।
ನಿಶ್ಚಿತಾನಾಮನಾರಂಭಂ
ಮಂತ್ರಸ್ಯಾಪರಿರಕ್ಷಣಂ ॥
ಮಂಗಳಸ್ಯಾಪ್ರಯೋಗಂ ಚ
ಪ್ರತ್ಯುತ್ಥಾನಂ ಚ ಸರ್ವತಃ ॥ –ಅಯೋಧ್ಯಾ

ನಾಸ್ತಿಕತೆ, ಸುಳ್ಳು, ಸಿಟ್ಟು, ಅಜಾಗರೂಕತೆ, ಕಾರ್ಯಮುಂದೂಡುವುದು, ವಿದ್ಯಾವಂತರನ್ನು ಗುರುತಿಸಿ ಗೌರವಿಸದಿರುವುದು, ಸೋಮಾರಿತನ, ಪಂಚೇಂದ್ರಿಯಗಳ ದಾಸ್ಯ, ಸದಾ ಹಣಸಂಪಾದನೆಯ ಚಿಂತೆ, ಅಥವಾ ರಾಜ್ಯದ ಪ್ರಧಾನ ಆರ್ಥಿಕ ವಿಷಯಗಳನ್ನು ಒಬ್ಬನೇ ಸಮಾಲೋಚಿಸು ( ನಿರ್ಣಯಿಸು )ವುದು, ಮೂರ್ಖರಿಂದ ಸಲಹೆ ಪಡೆಯುವುದು, ನಿರ್ಣೀತ ಯೋಜನೆಗಳನ್ನು ಸಕಾಲಕ್ಕೆ ಜಾರಿಗೊಳಿಸದಿರುವುದು, ರಹಸ್ಯಗಳನ್ನು ಕಾಯ್ದುಕೊಳ್ಳದಿರುವಿಕೆ, ಒಳ್ಳೆ ಕಾರ್ಯಮಾಡದಿರುವುದು, ಯೋಗ್ಯತೆ ಮೀರಿ ಎಲ್ಲರಿಗೂ ಗೌರವ ಸಲ್ಲಿಸುವುದು, ಇವು ರಾಜನ ಹದಿನಾಲ್ಕು ದೋಷಗಳು. ( ರಾಜನಾದವನು ಈ ದೋಷಗಳನ್ನು ತ್ಯಜಿಸಿರಬೇಕು.)

ಉದ್ವೇಜನೀಯೋ ಭೂತಾನಾಂ
ನೃಶಂಸಃ ಪಾಪಕರ್ಮಕೃತ್ ।
ತ್ರಯಾಣಾಮಪಿ ಲೋಕಾನಾಂ
ಈಶ್ವರೋಽಪಿ ನ ತಿಷ್ಠತಿ ॥ – ಅರಣ್ಯ

ಪ್ರಜಾಪೀಡಕ, ಕ್ರೂರಿ ಅನ್ಯಾಯವೆಸಗುವವನು ತ್ರಿಲೋಕಾಧಿಪತಿಯಾಗಿದ್ದರೂ ಅಳಿಯುವನು. ( ನಾಶಹೊಂದುತ್ತಾನೆ ).

ನ ಚಿರಂ ಪಾಪಕರ್ಮಾಣಃ
ಕ್ರೂರಾಃ ಲೋಕಜುಗುಪ್ಸಿತಾಃ ।
ಐಶ್ವರ್ಯಂ ಪ್ರಾಪ್ಯ ತಿಷ್ಠಂತಿ
ಶೀರ್ಣಮೂಲಾ ಇವ ದ್ರುಮಾಃ ॥ – ಅರಣ್ಯ

ಪ್ರಜೆಗಳು ಜಗುಪ್ಸೆ ಪಡುವಷ್ಟು ಅನ್ಯಾಯವೆಸಗಿದ ಕ್ರೂರಿಗಳು ( ಅಧಿಕಾರಾವಧಿಯಲ್ಲಿ ಹಣ ಸಂಗ್ರಹಿಸಿ ) ಸಿರಿವಂತರಾಗಿದ್ದರೂ ಕೊಳೆತ ಬೇರುಗಳುಳ್ಳ ಮರಗಳಂತೆ ಬಹುಕಾಲ ಇರಲಾರರು.

ಶ್ರೀ ಆರ್. ಗುರುರಾಜಗುಡಿ, ಬಿ.ಎ.

ಅಯುಕ್ತಚಾರಂ ದುರ್ದರ್ಶಂ
ಅಸ್ವಾಧೀನಂ ನರಾಧಿಪಮ್ ।
ವರ್ಜಯಂತಿ ನರಾ ದೂರಾ
ನ್ನದೀಪಂಕಮಿವ ದ್ವಿಪಾಃ ॥ – ಅರಣ್ಯ

ಅನ್ಯಾಯ ತಡೆಗಟ್ಟಲು ಗುಪ್ತಚಾರರನ್ನು ನೇಮಿಸದೇ ಇರುವ, ಪ್ರಜೆಗಳಿಗೆ ದರ್ಶನಕ್ಕೆ ಅವಕಾಶ ನೀಡದ, ಅನೀತಿ – ಅನ್ಯಾಯಗಳಿಂದ ಮನಬಂದಂತೆ ವರ್ತಿಸುವ ರಾಜನನ್ನು ನದಿಯ ಕೆಸರನ್ನು ತೊರೆಯುವ ಆನೆಗಳಂತೆ ಪ್ರಜೆಗಳು ದೂರವಿರಿಸುತ್ತಾರೆ.

ಅತಿಮಾನಿನಮಗ್ರಾಹ್ಯಂ
ಆತ್ಮಸಂಭಾವಿತಂ ನರಮ್ ।
ಕ್ರೋಧಿನಂ ವ್ಯಸನೇ ಹಂತಿ
ಸ್ವಜನೋಽಪಿ ಮಹೀಪತಿಮ್ ॥ – ಅರಣ್ಯ

ತನ್ನ ಯೋಗ್ಯತೆಯನ್ನು ಅತಿಯಾಗಿ ತಿಳಿಯುವ, ದುರ್ಗುಣ, ದುರ್ನಡತೆಗಳಿಂದ ಅಯೋಗ್ಯನೆನಿಸಿದ, ಕೋಪಿಷ್ಠ ಹಾಗೂ ದುರಹಂಕಾರಿಯಾದ ರಾಜನನ್ನು, ಆತನ ಬಂಧುಗಳೂ ಸಹ ನಾಶಪಡಿಸುತ್ತಾರೆ.

ಕುಲೀನಂ ಅಕುಲೀನಂ ವಾ
ವೀರಂ ಪುರುಷಮಾನಿನಮ್ ।
ಚಾರಿತ್ರ್ಯಮೇವ ವ್ಯಾಖ್ಯಾತಿ
ಶುಚಿಂ ವಾ ಯದಿ ವಾಽಶುಚಿಮ್ ॥
– ಅಯೋಧ್ಯಾ

ತಾನು ಕುಲೀನ ಹೌದೋ ಅಲ್ಲವೋ, ತಾನು ವೀರನೋ ಹೇಡಿಯೋ, ತನ್ನ ಆಚಾರ ವಿಚಾರಗಳಲ್ಲಿ ಶುದ್ಧತೆ ಇದೆಯೋ ಇಲ್ಲವೋ ಎಂಬುದನ್ನು ಆಯಾ ವ್ಯಕ್ತಿಗಳ ಚಾರಿತ್ರ್ಯವೇ ಸಾರುತ್ತದೆ. ( ಚಾರಿತ್ರ್ಯ ಶುದ್ಧತೆ ಅತ್ಯವಶ್ಯ )

ಸತ್ಯಮೇವಾನೃಶಂಸಂ ಚ
ರಾಜವೃತ್ತಂ ಸನಾತನಮ್ ।
ತಸ್ಮಾತ್ ಸತ್ಯಾತ್ಮಕಂ ರಾಜ್ಯಂ
ಸತ್ಯೇ ಲೋಕಃ ಪ್ರತಿಷ್ಠಿತಃ ॥ – ಅಯೋಧ್ಯಾ

ರಾಜ್ಯವ್ಯವಸ್ಥೆ 'ಸತ್ಯ'ದಲ್ಲಿಯೇ ನೆಲೆಗೊಂಡಿರುವುದರಿಂದ ಸತ್ಯನಿಷ್ಠೆ ಹಾಗೂ ಕ್ರೂರತನವಿಲ್ಲದಿರುವುದು – ಇವೆರಡೂ ರಾಜನಲ್ಲಿರಬೇಕಾದ ಸನಾತನ ಕರ್ತವ್ಯಗಳಾಗಿವೆ.

ಉದ್ವಿಜಂತೇ ಯಥಾ ಸರ್ಪಾತ್
ನರಾದನೃತವಾದಿನಃ ।
ಧರ್ಮಃ ಸತ್ಯಂ ಪರೋ ಲೋಕೇ
ಮೂಲಂ ಸ್ವರ್ಗಸ್ಯ ಚೋಚ್ಯತೇ ॥
– ಅಯೋಧ್ಯಾ

ಹಾವನ್ನು ಕಂಡಂತೆ ಸುಳ್ಳಾಡುವ ರಾಜನನ್ನು ಕಂಡಾಗ ಜನರು ಹೆದರುತ್ತಾರೆ. ಸತ್ಯವು ಜಗತ್ತಿನಲ್ಲಿ ಶ್ರೇಷ್ಠವಾದ ಧರ್ಮವೆನಿಸಿದ್ದು ಅದೇ ಸ್ವರ್ಗಪ್ರಾಪ್ತಿಗೂ ಮೂಲವಾಗಿದೆ.

ಯದ್ದ್ರವ್ಯಂ ಬಾಂಧವಾನಾಂ ವಾ
ಮಿತ್ರಾಣಾಂ ವಾ ಕ್ಷಯೇ ಭವೇತ್ ।
ನಾಹಂ ತತ್ಪ್ರತಿಗೃಹ್ಣೀಯಾಂ
ಭಕ್ಷ್ಯಾನ್ ವಿಷಕೃತಾನಿವ ॥ – ಅಯೋಧ್ಯಾ

ಬಂಧು ಮಿತ್ರರಿಗೆ ( ಸಮಾಜಕ್ಕೆ ) ಹಾನಿಯುಂಟಾಗಿ ಅದರಿಂದ ಹಣ ದೊರೆಯುವುದಾದರೆ, ವಿಷಬೆರೆತ ಭಕ್ಷ್ಯಗಳಂತೆ ನಾನು ಅವುಗಳನ್ನು ಸ್ವೀಕರಿಸುವುದಿಲ್ಲ.

ಅಧರ್ಮಸ್ತು ಮಹಾಂಸ್ತಾತ
ಭವೇತ್ತಸ್ಯ ಮಹೀಪತೇ ।
ಯೋ ಹರೇದ್ಬಲಿಷಡ್ಭಾಗಂ
ನ ಚ ರಕ್ಷತಿ ಪುತ್ರವತ್ ॥ – ಅರಣ್ಯ

ಪ್ರಜೆಗಳಿಂದ ಅವರ ಆದಾಯದ ಆರನೇ ಒಂದು ಭಾಗವನ್ನು ತೆರಿಗೆಯಾಗಿ ತೆಗೆದು ಕೊಂಡು ರಾಜನು ಆ ಪ್ರಜೆಗಳನ್ನು ರಕ್ಷಿಸದಿದ್ದರೆ ಆತನಿಗೆ ಮಹಾಪಾಪವು ತಟ್ಟುವುದು.

ತ್ವದ್ವಿಧಃ ಕಾಮವೃತ್ತೋ ಹಿ
ದುಃಶೀಲ ಪಾಪಮಂತ್ರಿತಃ ।
ಆತ್ಮಾನಂ ಸ್ವಜನಂ ರಾಷ್ಟ್ರಂ
ಸ ರಾಜಾ ಹಂತಿ ದುರ್ಮತಿಃ ॥
– ಅಯೋಧ್ಯಾ

ಕೆಟ್ಟ ನಡತೆಯುಳ್ಳ, ದುಷ್ಟರಿಂದ ಪ್ರೇರಿತನಾದ ಸ್ವೇಚ್ಛಾಚಾರಿಯಾದ ( ನಿನ್ನಂತಹ ) ರಾಜ ತನ್ನನ್ನು ತನ್ನ ಬಾಂಧವರನ್ನು ಕೊನೆಗೆ ರಾಷ್ಟ್ರವನ್ನೂ ಸಹ ವಿನಾಶಕ್ಕೆ ಗುರಿಪಡಿಸುವನು.

ತ್ರೀಣ್ಯೇವ ವ್ಯಸನಾನ್ಯತ್ರ
ಕಾಮಜಾನಿ ಭವಂತ್ಯುತ ।
ಮಿಥ್ಯಾವಾಕ್ಯಂ ಗುರುತರಂ
ತಸ್ಮಾತ್ ಗುರುತಮೋ ಉಭೇ ॥
ಪರದಾರಾಭಿಗಮನಂ
ವಿನಾ ವೈರಂ ಚ ರೌದ್ರತಾ ॥ – ಅರಣ್ಯ

ಸುಳ್ಳು ಮಾತನಾಡುವುದು, ಪರ ಸ್ತ್ರೀಗಮನ ಹಾಗೂ ನಿಷ್ಕಾರಣ ದ್ವೇಷಸಾಧನೆ ಹೀಗೆ ಆಸೆಯಿಂದ ಸಂಭವಿಸುವ ದೋಷಗಳು ಮೂರು. ಅದರಲ್ಲಿ ಮೊದಲನೆಯದು ದೊಡ್ಡ ದೋಷ. ಕೊನೆಯ ಎರಡೂ ಅದಕ್ಕೂ ಗುರುತರವಾದವುಗಳು.

ಆತ್ಮಾನಂ ನಿಯಮೈಸ್ತೈಸ್ತೈಃ
ಕರ್ಶಯಿತ್ವಾ ಪ್ರಯತ್ನತಃ ।
ಪ್ರಾಪ್ಯತೇ ನಿಪುಣೈರ್ಧರ್ಮೋ
ನ ಸುಖಾಲ್ಲಭ್ಯತೇ ಸುಖಮ್ ॥

ಸುಖಲೋಲುಪ ಹಾಗೂ ಸ್ವಚ್ಛಂದ ಜೀವನದಿಂದ ಧರ್ಮಸಾಧಿಸಲು (ತನ್ಮೂಲಕ ಸುಖಪಡೆಯಲು) ಸಾಧ್ಯವಿಲ್ಲದ್ದರಿಂದ ವಿವೇಕಿಗಳು, ಶರೀರವು ಕೃಶವಾದರೂ ಪ್ರಯತ್ನ ಪೂರ್ವಕವಾಗಿ ಇಂದ್ರಿಯ ನಿಗ್ರಹ ಮುಂತಾದುವುಗಳಿಂದ ಧರ್ಮವನ್ನು ಸಾಧಿಸುತ್ತಾರೆ.

ಕಾಯೇನ ಕುರುತೇ ಪಾಪಂ
ಮನಸಾ ಸಂವಿಚಾರ್ಯ ಚ ।
ಅನೃತಂ ಜಿಹ್ವಯಾ ಚೇಹ
ತ್ರಿವಿಧಂ ಕರ್ಮ ಪಾತಕಮ್ ॥
– ಅಯೋಧ್ಯಾ

ಶರೀರದಿಂದ ಮಾಡುವುದು, ಮನಸ್ಸಿನಿಂದ ಚಿಂತಿಸುವುದು ಹಾಗೂ ನಾಲಿಗೆಯಿಂದ ಸುಳ್ಳಾಡುವುದು ಹೀಗೆ ಪಾಪಕರ್ಮಗಳು ಮೂರು ವಿಧವಾಗಿವೆ.

ಅಲಂಕಾರೋ ಹಿ ನಾರೀಣಾಂ
ಕ್ಷಮಾ ತು ಪುರುಷಸ್ಯ ವಾ ।
ಕ್ಷಮಾ ದಾನಂ ಕ್ಷಮಾ ಸತ್ಯಂ
ಕ್ಷಮಾ ಯಜ್ಞಶ್ಚ ಪುತ್ರಿಕಾಃ ।
ಕ್ಷಮಾ ಯಶಃ ಕ್ಷಮಾ ಧರ್ಮಃ
ಕ್ಷಮಾಯಾಂ ವಿಷ್ಠಿತಂ ಜಗತ್ ॥

ಹೆಂಗಸರಿಗೂ, ಗಂಡಸರಿಗೂ ಕ್ಷಮೆ ಆಭರಣವಿದ್ದಂತೆ. ಕ್ಷಮೆಯೇ ದಾನ, ಸತ್ಯ, ಯಜ್ಞ, ಕೀರ್ತಿ, ಧರ್ಮ. ಎಲ್ಲವೂ ಕ್ಷಮಾ ಮೂಲಕವೇ ಆಗಿದ್ದು ಈ ಜಗತ್ತೆಲ್ಲವೂ ಕ್ಷಮೆಯನ್ನೇ ಆಶ್ರಯಿಸಿದೆ.

ಶೋಕೋ ನಾಶಯತೇ ಧೈರ್ಯಂ
ಶೋಕೋ ನಾಶಯತೇ ಶ್ರುತಂ !
ಶೋಕೋ ನಾಶಯತೇ ಸರ್ವಂ
ನಾಸ್ತಿ ಶೋಕಸಮೋ ರಿಪುಃ ॥ –ಅಯೋಧ್ಯಾ

ಶೋಕವು ಧೈರ್ಯ, ಶಾಸ್ತ್ರಾಭ್ಯಾಸಾನುಭವಗಳನ್ನು ನಾಶ ಮಾಡುತ್ತದೆ. ಸರ್ವನಾಶಕವಾದ ಶೋಕಸಮವಾದ ಶತ್ರುವೇ ಬೇರೊಂದಿಲ್ಲ.

ಅವಜ್ಞಯಾ ನ ದಾತವ್ಯಂ
ಕಸ್ಯಚಿಲ್ಲೀಲಯಾಪಿ ವಾ ।
ಅವಜ್ಞಯಾ ಕೃತಂ ಹನ್ಯಾ
ದ್ದಾತಾರಂ ನಾತ್ರ ಸಂಶಯಃ ॥ – ಬಾಲ

ತಿರಸ್ಕಾರದಿಂದ ದಾನ ನೀಡುವುದು ಅಥವಾ ದಾನ ಸ್ವೀಕರಿಸುವವನನ್ನು ಹಾಸ್ಯ ಅಥವಾ ಕುಚೋದ್ಯ ಮಾಡಿದರೆ ಅದರಿಂದ ದಾನವು ನಾಶ ಹೊಂದುವುದರಲ್ಲಿ ಸಂದೇಹವಿಲ್ಲ.

"ಶ್ರದ್ಧಯಾ ದೇಯಂ" ಎಂಬ ಎಂಬ ಉಪನಿಷತ್ತಿನ ರಹಸ್ಯವೂ ಇದೇ ಆಗಿದೆ.

ಗುರೋರಪ್ಯವಲಿಪ್ತಸ್ಯ
ಕಾರ್ಯಾಕಾರ್ಯ ಮಜಾನತಃ।
ಉತ್ಪಥಂ ಪ್ರತಿಪನ್ನಸ್ಯ
ಕಾರ್ಯಂ ಭವತಿ ಶಾಸನಮ್॥ –ಅಯೋಧ್ಯಾ

ಗುರುವೇ ಆದರೂ ಅಹಂಕಾರಿಯಾಗಿ ಸರಿತಪ್ಪುಗಳನ್ನು ವಿವೇಚಿಸದೆ ಅಡ್ಡದಾರಿ ಹಿಡಿದರೆ ಆತನನ್ನು ಶಿಕ್ಷಿಸಲೇ ಬೇಕಾಗುತ್ತದೆ.

ಗುರುಲಾಘವಮರ್ಥಾನಾಂ
ಆರಂಭೇ ಕರ್ಮಣಾಂ ಫಲಮ್।
ದೋಷಂ ವಾ ಯೋ ನ ಜಾನಾತಿ
ಸ ಬಾಲ ಇತಿ ಹೋಚ್ಯತೇ॥ – ಅಯೋಧ್ಯಾ

ಕಾರ್ಯಾರಂಭದಲ್ಲೇ ಆ ಕಾರ್ಯದಿಂದ ದೊರೆಯಬಹುದಾದ ಸ್ವಲ್ಪ ಅಥವಾ ಬಹಳವಾದ ಪ್ರಯೋಜನದ ಬಗ್ಗೆ ಅಥವಾ ಸಂಭವಿಸಬಹುದಾದ ದೋಷಗಳನ್ನು ತಿಳಿಯಲಸಮರ್ಥನು ಬಾಲಕನೇ ಸರಿ.

ಸುಜೀವಂ ನಿತ್ಯಶಕ್ತಸ್ಯ
ಯಃ ಪರೈರುಪಜೀವ್ಯತೇ।
ರಾಮ ತೇನ ತು ದುರ್ಜೀವಂ
ಯಃ ಪರಾನುಪಜೀವತಿ॥ – ಅಯೋಧ್ಯಾ

ಯಾರು ಇತರರಿಗೆ ಆಶ್ರಯದಾತನೋ ಆತನು ಸದಾಸುಖಿ. ಯಾರು ಪರಾವಲಂಬಿ ಆತನದು ದುಃಖದ ಜೀವನ.

ಅರ್ಥಧರ್ಮೌ ಪರಿತ್ಯಜ್ಯ
ಯಃ ಕಾಮಮನುವರ್ತತೇ।
ಏವಮಾಪದ್ಯತೇ ಕ್ಷಿಪ್ರಂ
ರಾಜಾ ದಶರಥೋ ಯಥಾ॥ –ಅಯೋಧ್ಯಾ

ಧರ್ಮಾರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳಲ್ಲಿ ಸಮತೋಲನ ಕಾಯ್ದುಕೊಳ್ಳದೆ ಧರ್ಮ, ಅರ್ಥಗಳನ್ನು ಬಿಟ್ಟು ಕೇವಲ ಕಾಮದತ್ತ ವಾಲಿದಾಗ ಆತನು ದಶರಥನಂತೆ ಕೂಡಲೇ ತೊಂದರೆಗೆ ಒಳಗಾಗುವನು.

ಅಕುರ್ವಂತೋಽಪಿ ಪಾಪಾನಿ
ಶುಚಯಃ ಪಾಪಸಂಶ್ರಯಾತ್।
ಪರಪಾಪೈರ್ವಿನಶ್ಯಂತಿ
ಮತ್ಸ್ಯಾ ನಾಗಹ್ರದೇ ಯಥಾ॥ – ಅರಣ್ಯ

ನಾಗರಹಾವು ಸೇರಿಕೊಂಡ ಸರೋವರದಲ್ಲಿ ವಾಸಿಸುವ ಮೀನುಗಳು ಆ ಸರ್ಪವನ್ನು ಕೊಲ್ಲಲು ಬಂದವರ ಪೆಟ್ಟಿಗೆ ಸಿಲುಕಿ ತಾವೂ ನಾಶ ಹೊಂದುವಂತೆ ನಿರಪರಾಧಿಗಳಾಗಿದ್ದರೂ ಪಾಪಿಗಳ ಸಂಪರ್ಕದಿಂದ ಅವರ ತಪ್ಪಿನಿಂದಾಗಿ ತಾವೂ ನಾಶ ಹೊಂದುತ್ತಾರೆ.

ಆಮ್ರಂ ಛಿತ್ವಾ ಕುಠಾರೇಣ
ನಿಂಬಂ ಪರಿಚರೇತ್ತು ಯಃ।
ಯಶ್ಚೈನಂ ಪಯಸಾ ಸಿಂಚೇತ್
ನೈವಾಸ್ಯ ಮಧುರೋ ಭವೇತ್॥
– ಅಯೋಧ್ಯಾ

ಕೊಡಲಿಯಿಂದ ಸಿಹಿ ಮಾವಿನ ಮರವನ್ನು ಕಡಿದು ಅದರ ಜಾಗದಲ್ಲಿ ನಿಂಬೆ ಸಸಿನೆಟ್ಟು ಅದಕ್ಕೆ ಹಾಲೆರೆದು ಪೋಷಿಸಿದರೂ ಸಿಹಿ ಫಲ ದೊರಕಲಾರವು.

ಯೋ ಹಿ ದತ್ವಾ ಗಜಶ್ರೇಷ್ಠಂ
ರಜ್ಜೌ ತು ಕುರುತೇ ಮನಃ।
ರಜ್ಜುಸ್ನೇಹೇನ ಕಿಂ ತಸ್ಯ
ತ್ಯಜತಃ ಕುಂಜರೋತ್ತಮಮ್॥
– ಅಯೋಧ್ಯಾ

ಉತ್ತಮ ಆನೆಯನ್ನು ಕೊಟ್ಟನಂತರ ಅದರ ಹಗ್ಗಕ್ಕೆ ಆಸೆಪಟ್ಟರೆ ಏನು ಉಪಯೋಗ? ಶ್ರೇಷ್ಠವಾದ ಆನೆಯೇ ಹೋದಮೇಲೆ ಅದರ ಹಗ್ಗದಿಂದ ಏನಾಗಬೇಕಿದೆ?

ಯದಾಚರತಿ ಕಲ್ಯಾಣಿ
ಶುಭಂ ವಾ ಯದಿ ವಾಽಶುಭಮ್।
ತದೇವ ಲಭತೇ ಭದ್ರಂ
ಕರ್ತಾ ಕರ್ಮಜ್ಞಮಾತ್ಮನಃ॥ –ಅಯೋಧ್ಯಾ

ಮನುಷ್ಯನು ತಾನು ಮಾಡಿದ ಒಳ್ಳೇ ಅಥವಾ ಕೆಟ್ಟ ಕರ್ಮಗಳಿಗನುಸಾರವಾಗಿ ತಪ್ಪದೇ ಫಲವನ್ನು ಪಡೆಯುತ್ತಾನೆ.

ಯಥಾ ಕಾಷ್ಠಂ ಚ ಕಾಷ್ಠಂ ಚ
ಸಮೇಯಾತಾಂ ಮಹಾರ್ಣವೇ।
ಸಮೇತ್ಯ ಚ ವ್ಯಪೇಯಾತಾಂ
ಕಾಲಮಾಸಾದ್ಯ ಕಂಚನ॥
ಏವಂ ಭಾರ್ಯಾಶ್ಚ ಪುತ್ರಾಶ್ಚ
ಜ್ಞಾತಯಶ್ಚ ಧನಾನಿ ಚ।
ಸಮೇತ್ಯ ವ್ಯವಧಾವಂತಿ
ಧ್ರುವೋ ಹ್ಯೇಷಾಂ ವಿನಾ ಭವಃ॥
– ಅಯೋಧ್ಯಾ

ಸಮುದ್ರದಲ್ಲಿ ತೇಲುವ ಕಟ್ಟಿಗೆತುಂಡುಗಳು ಅಲೆಗಳ ಸೆಳೆತದಿಂದ ಒಂದಾಗಿ ಕೂಡುತ್ತವೆ. ಆದರೆ ಮತ್ತೊಂದು ಅಲೆಯ ಹೊಡೆತದಿಂದ ಸ್ವಲ್ಪ ಹೊತ್ತಿನಲ್ಲಿಯೇ ಬೇರ್ಪಟ್ಟು ಹೋಗುತ್ತವೆ. ಹಾಗೆಯೇ ಹೆಂಡತಿ, ಮಕ್ಕಳು, ಬಂಧು ಮಿತ್ರರು ಸಂಪತ್ತು – ಇವೇ ಮುಂತಾದವುಗಳು ಕಾಲಪ್ರೇರಣೆಯಿಂದ ಬಂದು ನಮ್ಮನ್ನು ಸೇರುತ್ತವೆ. ಸ್ವಲ್ಪ ಸಮಯದ ನಂತರ ಅವೆಲ್ಲವೂ ದೂರವಾಗುವುವು. ಈ ಅಗಲುವಿಕೆ ನಿಶ್ಚಿತವಾದುದು.

ನಂದತ್ಯುದಿತ ಆದಿತ್ಯೇ
ನಂದತ್ಯಸ್ತಮಿತೇ ರವೌ।
ಆತ್ಮನೋ ನಾವಬುದ್ಧ್ಯಂತೇ
ಮನುಷ್ಯಾ ಜೀವಿತಕ್ಷಯಮ್॥ –ಅಯೋಧ್ಯಾ

ಸೂರ್ಯನು ಉದಯಿಸುವಾಗ ಹಾಗೂ ಅಸ್ತಮಿಸುವಾಗಲೂ ಆ ರಮಣೀಯತೆಯನ್ನು ಕಂಡು ಮನುಷ್ಯರು ಆನಂದಿಸುತ್ತಾರೆ. ಆದರೆ ಈ ಉದಯಾಸ್ತಗಳೊಡನೆ ತಮ್ಮ ಆಯುಷ್ಯವು ಕ್ಷೀಣಿಸುತ್ತದೆ ಎಂಬ ದುಃಖಕರ ಸಂಗತಿಯ ಅರಿವು ಮಾತ್ರ ಅವರಿಗಿಲ್ಲ.

ಸುಲಭಾಃ ಪುರುಷಾ ರಾಜನ್
ಸತತಂ ಪ್ರಿಯವಾದಿನಃ।
ಅಪ್ರಿಯಸ್ಯ ಚ ಪಥ್ಯಸ್ಯ
ವಕ್ತಾ ಶ್ರೋತಾ ಚ ದುರ್ಲಭಃ॥ – ಅರಣ್ಯ

ತಾನೇಕೆ ನಿಷ್ಠುರನಾಗಬೇಕೆಂದಲೀ, ಅಥವಾ ಬೇರೆ ಕಾರಣದಿಂದಾಗಲೀ ಜೇನಿನಂತೆ ಸಿಹಿ ಮಾತುನಾಡುವವರು ಬೇಕಾದಷ್ಟು ಜನ ದೊರೆಯುತ್ತಾರೆ. ಆದರೆ ಅಪ್ರಿಯವಾಗಿದ್ದರೂ ಹಿತವಾದ, ಸತ್ಯವಾದ ಮಾತನ್ನು ಹೇಳುವವರು ಹಾಗೂ ಆದರ ಮೇಲಿನ ಶ್ರದ್ಧೆಯಿಂದ ಅದನ್ನು ಕೇಳುವವರೂ ವಿರಳರು.

'ರಂಜಯತೀತಿ ರಾಜಾ' ಪ್ರಜೆಗಳನ್ನು ಸಂತೋಷ ಪಡಿಸುವವನೇ ನಿಜವಾದ ರಾಜ. ಎಲ್ಲರಿಗೂ ನ್ಯಾಯ ದೊರೆಯುವಂತೆ ಆಳುವುದೇ ರಾಜನ ಕರ್ತವ್ಯ. ಅಲ್ಲದೆ ರಾಜನು ಗಮನಿಸಬೇಕಾದ ರಾಜ್ಯಭಾರದ ಪ್ರಮುಖ ವಿಚಾರಗಳನ್ನು ಇಲ್ಲಿ ವಿವರಿಸಲಾಗಿದೆ. ಇಂದು ರಾಜರಿಲ್ಲ, ಇದು ಪ್ರಜಾರಾಜ್ಯ. ಪ್ರಜೆಗಳೇ ಇಲ್ಲಿ ರಾಜರು. ಜನರ ಪ್ರತಿನಿಧಿಗಳಾಗಿ ಚುನಾಯಿತರಾದವರೇ ರಾಜ್ಯವನ್ನು ಆಳುತ್ತಾರೆ. ಆದ್ದರಿಂದ ಎಲ್ಲ ಪ್ರಜೆಗಳು ಅದರಲ್ಲೂ ವಿಶೇಷವಾಗಿ ರಾಜ್ಯದ ಅಧಿಕಾರ ಸೂತ್ರವನ್ನು ಹಿಡಿದವರು (ರಾಜಕಾರಣಿಗಳು) ಈ ಮಾತುಗಳತ್ತ ಗಮನ ಹರಿಸಿ ಅವನ್ನು ಅಳವಡಿಸಿ ಕೊಳ್ಳಬೇಕಾಗಿದೆ. ★



# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರ ದಲ್ಲಿ ನೇಮಿಸುವಿಕೆ:

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ಆದಿಕಾವ್ಯದಲ್ಲಿ ಉಪಮಾಲಂಕಾರ

ಜಗನ್ಮಾನ್ಯನೂ, ಲೋಕ ಪೂಜಿತನೂ, ಭುವನೈಕ ವಂದ್ಯನೂ ಆದ, ಮರ್ಯಾದಾ ಪುರುಷೋತ್ತಮ, ಶ್ರೀರಾಮಚಂದ್ರನ ಪುಣ್ಯ ಕಥೆಯನ್ನು ರಮಣೀಯ ಶೈಲಿಯಲ್ಲಿ, ಕಮನೀಯಧಾಟಿಯಲ್ಲಿ, “ಶ್ಲೋಕಬದ್ಧಾಂ ಮನೋರಮಾಂ” – ಆದ ರೀತಿಯಲ್ಲಿ ರಚಿಸಿ, ಧನ್ಯನಾದ ವಾಲ್ಮೀಕಿ, ಆದಿಕವಿಯಾಗಿರುವಂತೆಯೇ ಅದ್ವಿತೀಯ ಕವಿಯೂ ಆಗಿದ್ದಾನೆಂಬುದು ನಿರ್ವಿವಾದ. ನವರಸಭರಿತವಾದ, ಪುಣ್ಯಪ್ರದವಾದ, ಧರ್ಮನೀತಿಪ್ರಧಾನವಾದ ಶ್ರೀಮದ್ರಾಮಾಯಣ ಮಹಾ ಕಾವ್ಯ, ವೇದ ಸದೃಶವಾದದ್ದು. “ವೇದಃ ಪ್ರಾಚೇತಸಾದಾಸೀತ್ ಸಾಕ್ಷಾದ್ರಾಮಾಯಣಾತ್ಮನಾ”– ಎಂಬ ಮಾತೇ ಇದಕ್ಕೆ ಸಾಕ್ಷಿಯಾಗಿದೆ.

ವಾಲ್ಮೀಕಿ ಕವಿಯೂ ಹೌದು; ಋಷಿಯೂ ಹೌದು. “ಮಧುಮಯ ಭಣಿತೀನಾಂ ಮಾರ್ಗದರ್ಶೀ ಮಹರ್ಷಿಃ” ಎಂದು ಆತನನ್ನು ಕೃತಜ್ಞತೆಯಿಂದ ಕೊಂಡಾಡಿದ್ದಾರೆ. ಆದಿಕವಿಗೆ ತನ್ನ ಭಕ್ತಿ ಕಾಣಿಕೆಯನ್ನು, ಗೌರವ ಪುರಸ್ಸರವಾಗಿ ಸಮರ್ಪಿಸದ ಕವಿಯೇ ಇಲ್ಲ. ಹೀಗೆ ಸಕಲ ಕವಿವೃಂದ ವಂದಿತ ಪೂಜ್ಯಪಾದನಾದ ವಾಲ್ಮೀಕಿಯ ಕೃತಿ – ಸಕ್ಕರೆಯಚ್ಚಿನಂತೆ ಹೇಗೆ ಸವಿದರೂ ಚೆನ್ನ. ಉಪಮಾಲಂಕಾರ ವೈಖರಿ ಎಂದ ಕೂಡಲೇ ಕಾಳಿದಾಸನ ನೆನಪು ಬರುವುದು ಸಹಜ. ಆದರೆ ಆತನೂ ಸಹ, ಯಾರ ದಿವ್ಯ ಪಾದಗಳಿಗೆ, ಕೃತಜ್ಞತಾಪೂರ್ವಕವಾದ ನಮಸ್ಸುಮಾಂಜಲಿಗಳನ್ನು, ಭಕ್ತಿಯಿಂದ ಸಮರ್ಪಿಸಿದ್ದಾನೆ – ಅಂತಹ ಪೂಜ್ಯಕವಿ ವಾಲ್ಮೀಕಿಯೂ ಉಪಮಾಲಂಕಾರ ವೈಭವದಲ್ಲಿ ಅನುಪಮ ಸಿದ್ಧಿ ಪಡೆದಿದ್ದಾನೆ. ಏಕೆಂದರೆ ಆತ ದ್ರಷ್ಟಾರ. ಆತ ಮುಟ್ಟಿದ್ದೆಲ್ಲ ಚಿನ್ನ.

ಒಂದು ಶುಭಸುಪ್ರಭಾತ. ದೇವರ್ಷಿ ನಾರದರು ಅಪ್ರಾರ್ಥಿತರಾಗಿ, ಅನಿರೀಕ್ಷಿತವಾಗಿ ವಾಲ್ಮೀಕಿಯಾಶ್ರಮಕ್ಕೆ ದಯಮಾಡಿಸಿ, ಪ್ರಸ್ತಾಪತ್ವೇನ ರಾಮ ಕಥೆಯನ್ನು ಆತನಿಗೆ ತಿಳಿಸಿದ್ದಾರೆ. ಪುಣ್ಯವೃತ್ತಾಂತ ಶ್ರವಣದಿಂದ ಪುಲಕಿತನಾದ ಮಹರ್ಷಿ ಪದ್ಧತಿಯಂತೆ ತಮಸಾನದಿಗೆ ಹೊರಟಿದ್ದಾನೆ – ಸ್ನಾನಾಹ್ನಿಕಾದ್ಯನುಷ್ಠಾನಕ್ಕೆ. ಜತೆಯಲ್ಲಿ ಭರದ್ವಾಜನೆಂಬ ಶಿಷ್ಯ – ಕಲಶ ವಲ್ಕಲಗಳನ್ನು ಹಿಡಿದು ಹೊರಟಿದ್ದಾನೆ. ಅನತಿದೂರದಲ್ಲಿ ಕಲಕಲನಿನಾದದ ಆ ಪಾವನ ಜಲಧಾರೆಯನ್ನು ಕಂಡು ಋಷಿ, ಕವಿಯಾದ, – ನಿಸರ್ಗ ಸೌಂದರ್ಯವೇ ಹಾಗೆ – ಶಿಷ್ಯನನ್ನು ಕುರಿತು ವಾಲ್ಮೀಕಿ – ಈ ತಮಸಾನದಿ ಎಷ್ಟು ನಿರ್ಮಲವಾಗಿದೆ ನೋಡು – ‘ಅಕರ್ದಮಮಿದಂ ತೀರ್ಥಂ, ರಮಣೀಯಂ ಪ್ರಸನ್ನಾಂಬು – ಸನ್ಮನುಷ್ಯಮನೋ ಯಥಾ’–ಎಂದ. ಸಜ್ಜನರ ಮನಸ್ಸಿನಂತೆ, ನದಿಯ ನೀರು ರಮಣೀಯವಾಗಿದೆ, ನಿರ್ಮಲವಾಗಿದೆ – ಪ್ರಸನ್ನವಾಗಿದೆ. ಸಾಮಾನ್ಯವಾಗಿ ಮನಸ್ಸನ್ನು ಜಲಾಶಯಕ್ಕೂ ಭಾವೋದ್ವೇಗಗಳನ್ನು ಅಲೆಗಳಿಗೂ ಹೋಲಿಸುವುದುಂಟು. ಸಜ್ಜನರ ಮನಸ್ಸು ರಾಗದ್ವೇಷ ರಹಿತವಾಗಿದ್ದು – ಕೊಳೆಕಶ್ಮಲಗಳಿಲ್ಲದೆ – ಅಕರ್ದಮವಾಗಿರುತ್ತದೆ. ಪಾಚಿ ಇಲ್ಲದ ನೀರು ಅಕರ್ದಮ ತೀರ್ಥ. ತಮಸೆ ದರ್ಶಕರಿಗೂ ಆನಂದದಾಯಕವಾಗಿದೆ – ಪ್ರಸನ್ನಾಂಬು – ಆಗಿದೆ. ಸಜ್ಜನರ ವೈಶಿಷ್ಟ್ಯವಾದ ಅಕರ್ದಮತೆ, ರಮಣೀಯತೆ, ಪ್ರಸನ್ನತೆಗಳನ್ನು ತಮಸಾನದಿಯಲ್ಲೂ ಕಂಡಿದ್ದಾನೆ ಋಷಿಕವಿ. ಈ ಉಪಮೆ ತುಂಬ ಗಂಭೀರವಾಗಿದೆ. ಕಾವ್ಯ ಪಾಠಕರನ್ನು ಯಾವುದೋ ಒಂದು ರಸಮಯ ಸ್ಥಿತಿಗೆ, ಒಂದು ಭಾವಲೋಕಕ್ಕೆ ಕೊಂಡೊಯ್ಯುವ ಸಾಮರ್ಥ್ಯವನ್ನು ಪಡೆದಿದೆ. ವಾಲ್ಮೀಕಿಯ ಕಾವ್ಯವನ್ನೋದುವುದು ಬೇರೆಯಲ್ಲ – ಭಾವ ಪರವಶರಾಗುವುದು ಬೇರೆಯಲ್ಲ. ಸಹೃದಯ ಪಾಠಕರು, ತಮ್ಮ ಹೃದಯ ವೀಣೆ, ಕವಿ ನುಡಿಸುವ ಕಾವ್ಯವೀಣಾ ಧ್ವನಿಗೆ ಪ್ರತಿಧ್ವನಿಸುತ್ತದೆ – ಪ್ರತಿಸ್ಪಂದಿಸುತ್ತದೆ ಎಂಬುದನ್ನು ಅನುಭವಿಸಲು, ಆದಿಕಾವ್ಯದ ಅಧ್ಯಯನ ಅತ್ಯಗತ್ಯ.

ಯಜ್ಞರಕ್ಷಣೆಗಾಗಿ ಶ್ರೀರಾಮಚಂದ್ರನನ್ನು ಕಳಿಸಬೇಕೆಂದು, ತಪೋಧನರಾದ ವಿಶ್ವಾಮಿತ್ರರು, ದಶರಥನನ್ನು ಒತ್ತಾಯಮಾಡಿ ಕೇಳುತ್ತಿದ್ದಾರೆ. ಹದಿನಾರು ವಸಂತಋತುಗಳನ್ನೂ ಕಂಡರಿಯದ ಸುಕುಮಾರನನ್ನು ಋಷಿಯ ಸಂಗಡ ಕಳಿಸಲಿಷ್ಟವಿಲ್ಲದೆ, ದಶರಥ ಸಂಕಟ ಪಡುತ್ತಿದ್ದಾನೆ. ಕೌಶಿಕನ ಸ್ವಭಾವವನ್ನು ಚೆನ್ನಾಗಿಬಲ್ಲ ವಸಿಷ್ಠರು, ಆತನು ಹುಬ್ಬುಗಂಟಿಕ್ಕುತ್ತಿರುವುದನ್ನು, ಸೂಕ್ಷ್ಮವಾಗಿ ಗಮನಿಸಿ, ಕೋಸಲೇಶ್ವರನಿಗೆ ಸಮಾಧಾನ ಹೇಳುತ್ತ –ಕೃತಾಸ್ತ್ರಮಕೃತಾಸ್ತ್ರಂ ವಾ ನೈವಂ ಶಕ್ಷ್ಯಂತಿ ರಾಕ್ಷಸಾಃ। ಗುಪ್ತಂ ಕುಶಿಕಪುತ್ರೇಣ ಜ್ವಲನೇನ ಅಮೃತಂ ಯಥಾ– ಎಂದರು. ರಾಮಚಂದ್ರನು ವಿಶ್ವಾಮಿತ್ರರ ಆಶ್ರಯದಲ್ಲಿ ಸುರಕ್ಷಿತವಾಗಿರುತ್ತಾನೆ. ಆತನನ್ನು ಯಾರೂ ಏನೂ ಮಾಡಲಾರರು – ಎಂದು ಕುಲಗುರುಗಳ ಅಭಿಪ್ರಾಯ. ಜಾಜ್ವಲ್ಯಮಾನವಾಗುರಿಯುತ್ತಿರುವ ಅಗ್ನಿಯ ಮಧ್ಯೆ ಇರುವ ಅಮೃತದಂತೆ, ದಾಶರಥಿ ಕ್ಷೇಮವಾಗಿರುತ್ತಾನೆ – ಕೌಶಿಕನ ಬಳಿ. ತಪೋಧನನಾದ ವಿಶ್ವಾಮಿತ್ರನನ್ನು ಪ್ರಜ್ವಲಿತ ವಹ್ನಿಗೂ, ರಾಮನನ್ನು ಅಮೃತಕ್ಕೂ ಹೋಲಿಸಿದ್ದಾನೆ. ವಿಶ್ವಾಮಿತ್ರನೆಂದರೆ ಸಾಮಾನ್ಯನಲ್ಲ; ವಿವಿಧ ಶಸ್ತ್ರಾಸ್ತ್ರ ಸೃಜನ ಸಾಮರ್ಥ್ಯ, ಪ್ರಯೋಗ ಪರಿಣತಿ – ಎರಡೂ ಆತನಿಗೆ ಕರತಲಾಮಲಕ. ಆತನ ತಪಸ್ತೇಜ ಅಗ್ನಿ ಸದೃಶ. ಆತನ ವರ್ಚಸ್ಸು ಅಗ್ನಿಜ್ವಾಲೆಯಂತೆ. ಪವಿತ್ರತೆ, ಸೌಕುಮಾರ್ಯ, ಸುಸ್ನಿಗ್ಧ ಗಾಂಭೀರ್ಯ, ಪರಿಶುಭ್ರ ಚಾರಿತ್ರ್ಯ – ಇತ್ಯಾದಿ ಕಲ್ಯಾಣ ಗುಣಗಳೆಲ್ಲವೂ ಧ್ವನಿಸಿದ – ಅಮೃತ – ಎಂಬ ಪದದ ಹಿಂದೆ, ಹಠದಿಂದ ಬ್ರಹ್ಮರ್ಷಿ ಪದವಿಯನ್ನು ಪಟ್ಟು ಹಿಡಿದು ಸಾಧಿಸಿದ ಮಹೋನ್ನತವ್ಯಕ್ತಿ ಗಾಧೇಯನ ಲಯೋಗ್ರಭೀಕರ ತೇಜಸ್ಸು ಇಣುಕಿ ನೋಡುತ್ತಿದೆ– ಜ್ವಲನ – ಎಂಬ ಪದದ ಹಿಂದೆ. ಮಹಾಕವಿ ವಾಲ್ಮೀಕಿಯ ಈ ಉಪಮಾನ, ಒಂದು ಕಡೆ ತನ್ನ ಪ್ರಶಾಂತ ಸಾತ್ವಿಕತೆಯಿಂದ ಅಮೃತದಂತೆ, ಇನ್ನೊಂದು ಕಡೆ ತಪೋಜನ್ಯ ದಿವ್ಯತೇಜಸ್ಸಿನಿಂದ ಅಗ್ನಿಜ್ವಾಲೆಯಂತೆ ಬೆಳಗುತ್ತಿದೆ.

ಪರಶುರಾಮನ ಕೋಪವನ್ನು ಯಾರೆಷ್ಟು ರೀತಿಯಲ್ಲಿ ವರ್ಣಿಸಿದರೂ ಸಾಲದು. ಯಾವ ಮಾತುಗಳೂ ಅದರ ತೀವ್ರತೆಯನ್ನು ಯಥಾವತ್ತಾಗಿ ತರಲಾರವೆಂಬುದು ಸತ್ಯಾಂಶ. ಮಹೋನ್ನತ ಸನ್ನಿವೇಶಗಳೆಲ್ಲ ಊಹಿಸಿಕೊಳ್ಳಬೇಕು. ಆದರೆ ಇಂತಹ ಸನ್ನಿವೇಶಗಳ ವರ್ಣನೆಯಲ್ಲೇ ಕವಿಯ ಸಾಮರ್ಥ್ಯ ಸ್ಪಷ್ಟ ಪಡುವುದು. ‘ಜ್ವಲಂತಮಿವ ಪಾವಕಂ, ಕಾಲಾಗ್ನಿಮಿವ ದುಸ್ಸಹಂ, ಕೈಲಾಸಮಿವ ದರ್ಧರ್ಷಂ, ಜ್ವಲಂತಮಿವ ತೇಜೋಭಿರ್ದುರ್ನಿರೀಕ್ಷ್ಯಂ ......’ ಹೀಗೆ ಸಶಕ್ತ ಉಪಮೆಗಳ ಮಾಲೆಯನ್ನೇ ಹೆಣೆದಿದ್ದಾನೆ– ಆದಿಕವಿ ಜಾಮದಗ್ನಿಯ ಕ್ರೋಧ ದೀಧಿತಿಯನ್ನು ಬಣ್ಣಿಸುವಾಗ.

**ವಿದ್ವಾನ್ ಬ. ನ. ಗುಂಡೂರಾವ್**

ಶ್ರೀರಾಮಚಂದ್ರನಿಗೆ ಯೌವರಾಜ್ಯಾಭಿಷೇಕ ಎಂಬ ಶುಭವಾರ್ತೆ ಕರ್ಣಾಕರ್ಣಿಯಾಗಿ, ಅಯೋಧ್ಯೆಯಲ್ಲಿ ಹರಡಿದೆ. ಜನರ ಸಂತೋಷ ಸಂಭ್ರಮಕ್ಕೆ ಪಾರವಿಲ್ಲವಾಗಿದೆ. ಆದರೆ ದಾಸಿ ಮಂಥರೆಗೆ ಇದೆಲ್ಲ ಕಂಡು ತುಂಬ ವ್ಯಥೆಯಾಗಿದೆ. ಮಲಗಿದ್ದ ಕೈಕೇಯಿಯನ್ನು ಹೊಡೆದೆಬ್ಬಿಸಿ – ಉತ್ತಿಷ್ಠ ಮೂಢೇ– ಎಂದು ಗದರಿಸಿ– ಚಲಂ ಹಿ ತವ ಸೌಭಾಗ್ಯಂ ನದ್ಯಾ ಸ್ರೋತ ಇವೋಷ್ಣಗೇ–ಎಂದಳು. ಬೇಸಿಗೆಯಲ್ಲಿ ಒಣಗಿ ಹೋಗುವ ನದಿಯಂತೆ, ಕೈಕೇಯಿಯ ಸೌಭಾಗ್ಯವೆಲ್ಲ ಬತ್ತಿಹೋಯ್ತುಂತೆ, ನದಿಯ ಒಣಗುವಿಕೆಗೆ ಬೇಸಿಗೆ ಕಾರಣವಿರಬಹುದು. ಆದರೆ ಕೈಕೇಯಿಯ ಸೌಭಾಗ್ಯನಾಶಕ್ಕೆ ರಾಮಾಭಿಷೇಕವೇ ಕಾರಣವೆನ್ನುವಾಗ ಕುಟಿಲ ಸ್ವಭಾವದ ದಾಸಿಯ ಮನಸ್ಸಿನಾಳ ಗೋಚರವಾಗುವಂತಿದೆ. ವೃದ್ಧ ದಶರಥನ ತೃತೀಯ ಪತ್ನಿ ಎಂದಾಗ, ಕೈಕೇಯಿಯ ಸೌಭಾಗ್ಯನದಿ– ಜೀವನದಿಯಂತೆ– ಸದಾತುಂಬಿ ಹರಿಯಲು ಸಾಧ್ಯವಿಲ್ಲವಷ್ಟೆ.

ಕೋಪಗೃಹದಲ್ಲಿ ದಶರಥ ಕೈಕೇಯಿಯನ್ನು ಕಂಡಾಗ 'ವ್ಯಾಘ್ರೀಂ ದೃಷ್ಟ್ವಾ ಯಥಾ ಮೃಗಃ'– ಎಂಬ ಉಪಮೆಯನ್ನು ಬಳಸಿದ್ದಾನೆ ವಾಲ್ಮೀಕಿ. ಕೈಕೇಯಿ ಹೆಣ್ಣು ಹುಲಿಯಂತಿದ್ದಾಳೆ. ಜಿಂಕೆಯಂತೆ ಭಯಪಟ್ಟು ಗತ್ಯಂತರವಿಲ್ಲದೆ ಸಾಯಲೇಬೇಕಾದ ಸ್ಥಿತಿಗೆ ದಶರಥ ಚಕ್ರವರ್ತಿ ಗುರಿಯಾಗಿದ್ದಾನೆ. ಹೆಣ್ಣು ಹುಲಿ, ಛಲಕ್ಕೂ ಕೋಪಕ್ಕೂ ಹೆಸರಾದ ಪ್ರಾಣಿ. ತನ್ನ ಮರಿಯ ಕ್ಷೇಮಕ್ಕೆ ಧಕ್ಕೆ ಬಂದಲ್ಲಿ– ಅದರ ಕೋಪ, ಶತ್ರುಗಳ ಮೇಲೆ ಅತ್ಯಂತ ತೀವ್ರರೂಪವನ್ನು ಪಡೆಯುತ್ತದೆಂದು ಹೇಳುತ್ತಾರೆ. ಭರತನ ಕ್ಷೇಮವೊಂದೇ ಕೈಕೇಯಿಗೆ ಬೇಕಾದ್ದು. ಯಾರಿಗೇನು ಅನಿಷ್ಟವಾದರೂ ಚಿಂತೆ ಇಲ್ಲ. ರಣಚಂಡಿಯಂತಿರುವ ಕೈಕೇಯಿಯ ಮುಂದೆ ವೃದ್ಧರಾಜ ಬೆದರಿದ ಜಿಂಕೆಯಲ್ಲದೆ ಮತ್ತೇನು ತಾನೆ ಆದಾನು. ಅದೂ ಮೂರನೆಯ ಹೆಂಡತಿಯ ಮುಂದೆ!! ಕೈಕೇಯಿ ದಶರಥನ ಮೋಹದ ಮಡದಿ. ಗಾದೆಯೇ ಇದೆ. – 'ವೃದ್ಧಸ್ಯ ತರುಣೀ ಭಾರ್ಯಾ ಪ್ರಾಣೇಭ್ಯೋಪಿ ಗರೀಯಸೀ'– ಇದೂ ವಾಲ್ಮೀಕಿಯ ಮಾತೇ!! ಚಕ್ರವರ್ತಿಗೆ ಈಗ ಅರ್ಥವಾಗತೊಡಗಿತು – ಆಕೆ ತೋರುತ್ತಿದ್ದ ವಿಶ್ವಾಸ ಆಡುತ್ತಿದ್ದ ಮಧುರವಾದ ಮಾತು...... ಎಲ್ಲದರ ಹಿಂದೆ ಯಾವುದೋ ಕ್ರೂರ ಉದ್ದೇಶವಡಗಿತ್ತೆಂದು. ಬೇಟೆಗಾರನೂ ಅಷ್ಟೆ. ಜಿಂಕೆಯನ್ನು ಪ್ರಾರಂಭದಲ್ಲಿ ಮಧುರಗಾನದಿಂದ ಆಕರ್ಷಿಸುತ್ತಾನೆ. ನಂತರ ಸಮಯ ನೋಡಿ ಜೀವ ತೆಗೆಯುತ್ತಾನೆ. ಕೈಕೇಯಿಯ ವ್ಯವಹಾರವೆಲ್ಲ ರಾಗಮಯವಾಗಿತ್ತು, ಅನುರಾಗ ಪೂರ್ಣವಾಗಿತ್ತು, ಬೇಟೆಗಾರನ ಸಂಗೀತದಂತೆ. ದಶರಥ ಆಕರ್ಷಿತನಾದ. ತತ್ಪರಿಣಾಮವಾಗಿ ಈಗ ಪ್ರಾಣಬಿಡಬೇಕಾದ ಸಂದರ್ಭ ಬಂತು. "ಗೀತ ಶಬ್ದೇನ ಸಂರುಧ್ಯ ಲುಬ್ಧೋ ಮೃಗಮಿವಾವಧೀಃ"–ಎಂದಿದ್ದಾನೆ ಆದಿಕವಿವಾಲ್ಮೀಕಿ. ಕೇಳಿದ್ದು ವರವೋ – ಬೀಸಿ ಎಸೆದ ಶರವೋ!

ಕೈಕೇಯಿಯರಮನೆಯಲ್ಲಿ ತಂದೆಯ ಸ್ಥಿತಿಯನ್ನು ಕಂಡು, ರಾಮ ಭಯಭ್ರಾಂತನಾಗಿದ್ದಾನೆ – "ಉಪಪ್ಲುತಮಿವಾದಿತ್ಯಂ; ಉಕ್ತಾನೃತಂ ಋಷಿಂ ಯಥಾ"– ಹೀಗಿದ್ದನಂತೆ, ದುಃಖತಪ್ತನೂ ತೇಜೋಹೀನನೂ ಆದ ದಶರಥ. ರಾಹು ಹಿಡಿದ ಸೂರ್ಯನಂತೆ, ಸುಳ್ಳಾಡಿದ ಮಹರ್ಷಿಯಂತೆ ತೇಜೋಹೀನನಾಗಿದ್ದನಂತೆ!! ಸೂರ್ಯನ ತೇಜಸ್ಸು ಲೋಕ ಪ್ರಸಿದ್ಧವೇ, ಆದರೂ ರಾಹು ಹಿಡಿದಾಗ – ಗ್ರಹಣ ಹಿಡಿದಾಗ ಸೂರ್ಯನಿಗೆಂತಹ ಇಕ್ಕಟ್ಟಿನ ಪರಿಸ್ಥಿತಿ? ಸಾಕೇತಸಾರ್ವಭೌಮನೂ ಲೋಕ ವಿಖ್ಯಾತನೂ ಆದರೂ, ಕೈಕೇಯಿ ಎಂಬ ರಾಹು ಹಿಡಿದು ಬಿಟ್ಟಿದೆ. ಸುಳ್ಳಾಡಿದವನ ಮುಖ ತೇಜೋಹೀನ ವಾಗಿರುತ್ತದೆಂಬುದನ್ನು, ಈ ಕಾಲದವರು ಅಷ್ಟಾಗಿ ನಂಬದೇ ಹೋದರೂ, ಆ ಮಾತಿನ ಹಿಂದಿರುವ ಮನೋವೈಜ್ಞಾನಿಕ ಸತ್ಯವಂತೂ ತ್ರಿಕಾಲಾಬಾಧಿತ. ಆಡಬಾರದಮಾತು, ಮಾಡಬಾರದ ಕಾರ್ಯ, ಆಡಿದಾಗ, ಮಾಡಿದಾಗ, ವ್ಯಕ್ತಿಯ ಮುಖದ ವರ್ಚಸ್ಸು ಕುಗ್ಗಿ ಹೋಗಿರುತ್ತದೆಂಬುದು, ಸೂಕ್ಷ್ಮವಾಗಿ ಪರಿಶೀಲಿಸುವ ಯಾರಿಗೇ ಆದರೂ ಭಾಸವಾಗದೇ ಇರದು. ಪರಮಪೂಜ್ಯನಾದ ಮಹರ್ಷಿ ಸುಳ್ಳಾಡುವುದೆಂದರೆ ಆತನಾರ್ಜಸಿದ ಸಂಪನ್ನತೆಯೆಲ್ಲ ನಾಶವಾದಂತೆ. ಇಲ್ಲಿ ಮಹರ್ಷಿಯಲ್ಲ ರಾಜರ್ಷಿ ಇದ್ದಾನೆ. ಆತನ ಮುಖದ ಕಾಂತಿಯೇ ಸತ್ತು ಹೋಗಿದೆ. ನಿಸ್ತೇಜವಾದ ಆ ಮುಖಕ್ಕೆ ಋಷಿಕವಿ ಕೊಟ್ಟಿರುವ ಉಪಮೆ, ಎಷ್ಟೆಷ್ಟು ರೀತಿಯಲ್ಲಿ ವಿವರಿಸಿದರೂ ಸಾಲದೆಂಬಷ್ಟು, ಅರ್ಥಗಾಂಭೀರ್ಯವನ್ನು ಪಡೆದಿದೆ. ಸುಳ್ಳಾಡಿದ ಋಷಿಯ ಮುಖ, ಸುಳ್ಳಾಡಲಾರದೆ, ವಚನ ಬದ್ಧನಾಗಿ ಇಕ್ಕಟ್ಟಿಗೆ ಕಂಗಾಲಾಗಿರುವ ರಾಜರ್ಷಿಯ ಮುಖ, ಇವೆರಡನ್ನೂ ಹೋಲಿಕೆ ಹಾಕಿದಾಗ, ಅವರ್ಣನೀಯ ಸಂಕಟ, ಅಸಹನೀಯ ಅನ್ತರ್ವೇದನೆ ಉಭಯ ಸಾಮಾನ್ಯವಷ್ಟೆ!!

ಇದನ್ನು ಕಂಡು ರಾಮನ ಮನಸ್ಸೇನಾಯ್ತು? 'ಬಭೂವ ಸಂರಬ್ಧ ಪರಃ ಸಮುದ್ರ ಇವ ಪರ್ವಣಿ'– ಪರ್ವಕಾಲದ ಸಮುದ್ರದ ಸ್ಥಿತಿಯಂತಾಯ್ತು. ಪರ್ವದಿನಗಳಲ್ಲಿ ತನ್ನ ದ್ವೈತ್ಯತರಂಗ ಘೋಷದಿಂದ, ಸಾಗರ ಭೋರ್ಗರೆಯುತ್ತದೆಂಬುದು ಕೇವಲ ಕವಿ ಸಮಯವಷ್ಟೇ ಅಲ್ಲ. ನೈಸರ್ಗಿಕ ಘಟನೆಯೂ ಹೌದು. ತರಂಗಾಘಾತಗಳನ್ನು ಕಂಡು ಸಾಗರ ಅಟ್ಟಹಾಸಮಾಡಿ ಉತ್ಸಾಹದಿಂದ ನಗುತ್ತಿದೆ ಎನ್ನುವುದಕ್ಕೂ, ಅದೇ ತರಂಗಾಘಾತ ಕಂಡು ವ್ಯಸನದಿಂದ ಸಾಗರದ ಹೃದಯ ಉಲ್ಲೋಲ ಕಲ್ಲೋಲವಾಗಿದೆ ಎನ್ನುವುದಕ್ಕೂ ಅಂತರವಿದೆ. ಇಲ್ಲಿ ರಾಮನ ಮನಸ್ಸು ಸಾವಿರಾರು ಆಲೋಚನಾ ತರಂಗಗಳಿಂದ ಕೂಡಿದೆ – ಉಲ್ಲೋಲ ಕಲ್ಲೋಲವಾಗಿದೆ – ಎಂಬ ಅರ್ಥವೇ ಧ್ವನಿಸುತ್ತಿದೆ. ಸನ್ನಿವೇಶಗಳನ್ನು ಕಾಣುವ ದೃಷ್ಟಿಗೆ ಕೋನಗಳು, ನಮ್ಮ ಮನೋಭಾವನೆಗಳ ಮೇಲೆ ಆಧಾರಪಟ್ಟಿರುತ್ತವೆ.

ಪಿತೃವಾಕ್ಯ ಪರಿಪಾಲನೆಗಾಗಿ, ರಾಮಚಂದ್ರ ಸೀತಾ ಸೌಮಿತ್ರಿ ಸಮೇತ ಕಾಡಿಗೆ ಪಯಣ ಬೆಳೆಸಿದ್ದಾನೆ. ಅವರು ಹೊರಟ ರಥವನ್ನು ಸ್ವಲ್ಪದೂರ ಹಿಂಬಾಲಿಸಿ ಹೋದ ದಶರಥ, ಹೇಳಲಾಗದ ಸಂಕಟವನ್ನನುಭವಿಸುತ್ತ, ಕೌಸಲ್ಯೆಯರ ಮನೆಯಲ್ಲಿ ಚಡಪಡಿಸುತ್ತಿದ್ದಾನೆ. ಕವಿವಾಲ್ಮೀಕಿ ಇಲ್ಲಿ 'ಉಪಸ್ನಾತ ಇವ ಅರಿಷ್ಟಂ ಪ್ರವಿವೇಶ ಗೃಹೋತ್ತಮಂ'–ಎಂದಿದ್ದಾನೆ. ಆಪ್ತ ವ್ಯಕ್ತಿಯನ್ನು ಮಸಣದಲ್ಲಿ ಸುಟ್ಟು ಬರುವ ಘೋರ ಸನ್ನಿವೇಶವನ್ನು ಕಲ್ಪಿಸಿ ಕೊಳ್ಳಬೇಕು, ತಣ್ಣೀರಿನಲ್ಲಿ ಸ್ನಾನಮಾಡಿಕೊಂಡು ಬರುತ್ತಿದ್ದರೂ ಮನಸಿನ ಸಂಕಟದ ಬಿಸಿ ಆರಲು ಸಾಧ್ಯವೇ? ಆಗ ಜಗತ್ತೆಲ್ಲವೂ ಶೂನ್ಯವಾಗಿ ಭಾಸವಾಗುತ್ತದೆ. ಹೇಳಲಾಗದ, ತಾಳಲಾಗದ ಏನೋ ಒಂದು ಬಗೆಯ ತಪನವನ್ನನುಭವಿಸುತ್ತದೆ ಆ ಜೀವ. ಇಲ್ಲಿ ವೃದ್ಧ ದಶರಥನೂ ಅಷ್ಟೆ. ಕುಲದೀಪಕರಾದ ಮಕ್ಕಳನ್ನೂ, ಮುಂದಣ ಮಹಿಯಸಿಯಾದ ಸೊಸೆಯನ್ನೂ ಕಾಡಿಗೆ ಕಳಿಸಿ ಬಂದಿದ್ದಾನೆ. ದಾರಿಯಲ್ಲಿ ಬಿದ್ದು ಧೂಳಿನಲ್ಲಿ ಸ್ನಾನಮಾಡಿ ಬಂದಿದ್ದಾನೆ. ಸುಟ್ಟುಬಂದಾತ ಸುಡಲ್ಪಟ್ಟವ್ಯಕ್ತಿಯನ್ನು ಪುನಃ ನೋಡಲು ಸಾಧ್ಯವಿಲ್ಲವಷ್ಟೆ. ಅದೇ ರೀತಿ, ದಶರಥನೂ ಸಹ ರಾಮಾದಿಗಳನ್ನು ಪುನಃ ನೋಡಲಾರ. ಅವರು ಕಾಡಿಗೆ ಹೊರಟದ್ದು; ಅವರ ಮಂಗಳ ಸ್ವರೂಪ, ಅರಮನೆಯಲ್ಲಿ ಅವರು ಇದ್ದಾಗಿನ ಸಂತೋಷ ಸಂಭ್ರಮಗಳು–ಎಲ್ಲವೂ ದಶರಥನಿಗೆ ಪದೇ ಪದೇ ನೆನಪಿಗೆ ಬರುತ್ತದೆ. ಪೂರ್ವಸ್ಮೃತಿಗಳು ಶಸ್ತ್ರಾಘಾತದಂತೆ, ಆತನನ್ನು ಹಿಂಸಿಸುತ್ತಿವೆ. ಪಶ್ಚಿಮಾಂಬುಧಿಯನ್ನು ಪ್ರವೇಶಿಸುವ ಸೂರ್ಯನಂತೆ ದಶರಥ, ಜ್ಯೇಷ್ಠ ಪತ್ನಿಯರ ಮನೆಗೆ ಹೋದ. ಅಲ್ಲಿಗೆ ಹೋದಮೇಲೆ ಸೂರ್ಯನು ಮುಳುಗಿ ಹೋದನೆಂದೇ ಅರ್ಥ. ದಶರಥನ ಜೀವವೂ ಮುಳುಗಿ ಹೋಯ್ತೆಂದೇ ಅರ್ಥ. ಸೂರ್ಯನಾದರೂ ನಾಳೆ ಬಂದಾನು, ಉದಿಸಿ ಬಂದಾನು, ಆದರೆ ದಶರಥ!

ರಾಮದರ್ಶನಕ್ಕಾಗಿ, ಭರತ, ಚಿತ್ರಕೂಟದತ್ತ ಬರುವ ಸನ್ನಿವೇಶದಲ್ಲಿ, ಭರತನ ಮಾನಸಿಕ

(24 ನೇ ಪುಟ ನೋಡಿ)

## ಹರಿದಾಸ ವಾಣಿ

ಕರ್ನಾಟಕದಲ್ಲಿ ಭಗವದ್ಭಕ್ತಿಯನ್ನು ಪ್ರಬೋಧಿಸಿ ಅಜ್ಞಾನ ಸುಷುಪ್ತಿಯಿಂದ ಜನರನ್ನು ಎಬ್ಬಿಸಿದ ಹರಿದಾಸರು ಶ್ರೀ ರಾಮನ ಪರವಾಗಿ ಬಹಳಷ್ಟು ಕೀರ್ತನೆಗಳನ್ನು ರಚಿಸಿದ್ದಾರೆ.

ಶ್ರೀಪಾದರಾಜರು ಕನ್ನಡದಲ್ಲಿ ಹರಿದಾಸ ಕೀರ್ತನೆಗಳಿಗೆ ಶ್ರೀಕಾರ ಹಾಕಿದ ಹಿರಿಯರು. ಅವರ ಕೀರ್ತನೆಗಳಲ್ಲಿ ರಾಮಾಯಣವನ್ನು ಕುರಿತಂತೆ ಮಾತ್ರವೇ ಅಲ್ಲದೆ ಅದರ ಕರ್ತೃ ವಾಲ್ಮೀಕಿಯನ್ನು ಕುರಿತಂತೆ ವಿವರಗಳಿವೆ.

ಅವನು ವನದೊಳಗೆ ನಿತ್ಯದಿ
ಬಾಹ ಜನರನು ಬಡಿದು
ಜೀವನ ಮಾಳ್ಪ ಕಿರಾತನು ಕೀರ್ತಿಸೆ
ತಾ ಒಲಿದಾತನ ಕೋವಿದನೆನಿಸಿದ

—ವನದೊಳಗೆ ದರೋಡೆ ಮಾಡುತ್ತಾ ಬದುಕಿದ್ದ ವಾಲ್ಮೀಕಿ ನಾರದೋಪದೇಶದಿಂದ ರಾಮ ಜಪವನ್ನಾರಂಭಿಸಿ ಆದಿಕವಿಯಾದ ಎಂಬ ಸಂಗತಿ ಜನಜನಿತವಾಗಿರುವುದು. ಕಿರಾತನ ಕೀರ್ತನೆಗೆ ಒಲಿದಾತನು, ತನ್ನನ್ನು ನಂಬಿದವರ – ಭಜಿಸಿದವರ ಸಲಹುವನೆನ್ನುವುದು ಶ್ರೀಪಾದರಾಜರ ಅಭಿಪ್ರಾಯ.

ವ್ಯಾಸರಾಯರು ಶ್ರೀಪಾದರಾಜರ ಶಿಷ್ಯರು. ಅವರಿಗೆ ಹನುಮನೆಂದರೆ ಪ್ರೀತಿ. ಆದರೆ ಶ್ರೀರಾಮಚಂದ್ರನನ್ನು ಕುರಿತು ಅವರ ಅಭಿಮಾನ ಕಡಮೆಯದೇನಲ್ಲ. ಅವರ ಕೀರ್ತನೆಯಂತೆ ಸೋಮಶೇಖರನು ಮಾತ್ರವೇ ಶ್ರೀರಾಮಮಂತ್ರದ ಮಹಿಮೆಯನ್ನು ಸರಿಯಾಗಿ ತಿಳಿದವನು. ಸೋಮಶೇಖರನ ರೂಪವೇ ಶ್ರೀರಾಮನ ಪೂಜೆಯಂತೆ ಅವರಿಗೆ ಕಂಡು ಬಂದಿದೆ.

ಶಿರದ ಗಂಗೆಯು ವರ ಅರ್ಘ್ಯಣಿಯಾಗಿರೆ
ಸರಸಿಜ ಬಾಂಧವ ಚಂದಿರ ದೀಪ
ಉರಿಗಣ್ಣಿನ ಹೊಗೆ ಧೂಪವನೇರಿಸಿ
ಕರಣವೆ ನೈವೇದ್ಯವೆಂಬ

* * * *

ಕರ್ನಾಟಕ ಸಂಗೀತ ಪಿತಾಮಹರೂ, ಹರಿದಾಸಪಂಥಕ್ಕೆ ಆದರ್ಶ ಪ್ರಾಯರೂ, ಹಾಗೂ ವ್ಯಾಸರಾಯರ ಆಪ್ತ ಶಿಷ್ಯರಾದ ಪುರಂದರದಾಸರು ಶ್ರೀರಾಮನ ಮಹತ್ತ್ವವನ್ನು ಈ ರೀತಿ ವರ್ಣಿಸಿರುವರು.

ಇಲ್ಲಿ ನೋಡಲು ರಾಮ ಅಲ್ಲಿ ನೋಡಲು
ರಾಮ ।
ಎಲ್ಲೆಲ್ಲಿ ನೋಡಲು ರಾಮಚಂದ್ರನು
॥ ಪಲ್ಲ ॥
ಮೂಲೋಕದಲ್ಲಿ ತ್ರೈಮೂರ್ತಿ
ರೂಪಗಳಲ್ಲಿ ।
ಎಲ್ಲೆಲ್ಲಿ ನೋಡಲು ಅಲ್ಲಲ್ಲಿ ರಾಮ ರೂಪ
॥ ಅ.ಪ ॥
ರಾವಣನ ಮೂಲ ಬಲವ ಕಂಡು
ಕಪಿಗಳು ।
ಆವಾಗಲೆ ಹೊರಟೋಡುತಿರೆ ॥

ರಾಮ ಮಂತ್ರವ ಜಪಿಸೋ ಹೇ ಮನುಜ
॥ ಪಲ್ಲ ॥
ಆ ಮಂತ್ರ ಈ ಮಂತ್ರ ನೆಚ್ಚಿ ನೀ ಕೆಡ
ಬೇಡ ।
ಸೋಮಶೇಖರ ತನ್ನ ಸತಿಗೆ ಪೇಳಿದ
ಮಂತ್ರ । ॥ ಅ.ಪ ॥
ಕುಲಹೀನನಾದರು ಕೂಗಿ ಜಪಿಸುವ
ಮಂತ್ರ ।
ಸಲೆಬೀದಿಯೊಳು ಉಚ್ಚರಿಸ ಮಂತ್ರ ।
ಹಲವು ಪಾಪಂಗಳ ಹದಗೆಡಿಸುವ
ಮಂತ್ರ ।
ಸುಲಭದಿಂದ ಸ್ವರ್ಗ ಸೂರೆಗೊಂಬುವ
ಮಂತ್ರ ।

* * * *

# ದಾಸರು - ರಾಮಾಯಣ

ಈವಾಗ ನರನಾಗಿ ಇರಬಾರದೆಂದೆನುತ ।
ದೇವರಾಮಚಂದ್ರ ಬಹುರೂಪ
ತಾನಾದ ॥
ಅವನಿಗೆ ಇವರಾಮ ಇವನಿಗೆ ಅವರಾಮ ।
ಭುವಿಯೊಳಗೆ ಬೇರೆ ರೂಪವುಂಟೆ ।
ಅವನಿಯೊಳಿದುತಿಪ್ಪ ದುರುಳ ಜನರೆಲ್ಲ ।
ಅವರವರೆ ಹೊಡೆದಾಡಿ ಹತವಾಗಿ
ಹೋದರು ॥

ಹನುಮಂತಾದಿ ಸಾಧು ಜನರು
ಅಪ್ಪಿಕೊಂಡು ।
ಕಣಿದಾಡಿದರು ಅತಿಹರುಷದಲಿ ॥
ಕ್ಷಣದಲಿ ಪುರಂದರ ವಿಠಲರಾಯನು
ಕೊನೆಗೆ ರಾಮಚಂದ್ರನೊಬ್ಬನಾಗಿನಿಂತ ॥

ಇಂತಹ ರಾಮಚಂದ್ರನ ನಾಮವನ್ನು ನೆನೆದು ಮುಕ್ತರಾಗುವುದು ಮಾನವರಿಗೆ ಸುಲಭ ಸಾಧ್ಯವಾದ ಕೆಲಸ. ಕಲಿಯುಗದಲ್ಲಿ ಹರಿನಾಮವ ಜಪಿಸುವುದೇ ಸುಕೃತವಲ್ಲವೇ! ಅದನ್ನೇ ಪುರಂದರದಾಸರು ಹೇಳುವ ರೀತಿ ಇದು.

" ಚರಿತಂ ರಘುನಾಥಸ್ಯ
ಶತಕೋಟಿ ಪ್ರವಿಸ್ತರಮ್ ।
ಏಕೈಕಮಕ್ಷರಂ ಪ್ರೋಕ್ತಂ
ಮಹಾ ಪಾತಕ ನಾಶನಮ್ ॥ "

ರಾಮಚರಿತೆಯಲ್ಲಿರುವ ಒಂದು ಅಕ್ಷರವನ್ನು ಹೇಳಿದರೆ ಮಹಾಪಾತಕಗಳು ನಾಶವಾಗುತ್ತವೆ ಎಂದು ಹೇಳಲಾಗಿದೆ. ಇದೇ ಭಾವವನ್ನು ಪುರಂದರ ದಾಸರು ತಿಳಿ ಕನ್ನಡದಲ್ಲಿ ಸರ್ವರಿಗೂ ಅರ್ಥವಾಗುವಂತೆ ಹೇಳಿದ್ದಾರೆ.

ರಾಮ ಎನ್ನುವ ಎರಡು ಅಕ್ಷರದ ಮಹಿ
ಮೆಯನು ।
ಪಾಮರರು ತಾವೇನು ಬಲ್ಲರಯ್ಯಾ ॥ಪ॥
ರಾಯೆಂದ ಮಾತ್ರದೊಳು
ರಕ್ತಮಾಂಸ ದೊಳಿದ್ದ ।
ಆಯುಸ್ಥಿಗತವಾದ ಅತಿಪಾಪವನ್ನು

**ಶ್ರೀ ಕೆ. ವಾದಿರಾಜಾರಾವ್**

ಮಾಯವನು ಮಾಡಿ ಮಹರಾಜು
ಮುಕ್ತಿಯ ಕೊಡುವ ।
ದಾಯವನು ವಾಲ್ಮೀಕಿ
ಮುನಿರಾಯ ಬಲ್ಲ ॥೧॥

ಮತ್ತೆ ಮಾ ಎಂದೆನಲು ಹೋಗಿಬಿದ್ದ
ಪಾಪಗಳು ।
ಒತ್ತಿ ಒಳ ಹೋಗದಂತೆಯೆ
ಕವಾಟವಾಗಿ ।
ಚಿತ್ತಕಾಯಗಳ ಸುಪವಿತ್ರ
ಮಾಡುವ ಪರಿಯ ।
ಭಕ್ತವರ ಹನುಮಂತ ತಾನೊಬ್ಬ ಬಲ್ಲ
॥೨॥

ಧರೆಯೊಳೀ ನಾಮಕ್ಕೆ ಸರಿಮಿಗಿಲು
ಇಲ್ಲೆಂದು ।
ಪರಮ ವೇದಗಳೆಲ್ಲ ಪೊಗಳುತಿಹವು ।
ಸಿರಿಯರಸ ಶ್ರೀಪುರಂದರವಿಠಲ
ರಾಮನನು ।
ವರಕಾಶಿಯೊಳಗಿಪ್ಪ ಶಿವನು ತಾ ಬಲ್ಲ ॥೩॥

ಕನಕದಾಸರು ವ್ಯಾಸರಾಯರ ಶಿಷ್ಯರು. ಪುರಂದರದಾಸರ ಸಹಪಾಠಿಗಳು. ಅವರಿಗೆ 'ರಾಗಿ' ಧಾನ್ಯದ ಪರವಾಗಿ ವಿಶೇಷ ಅಭಿಮಾನ. ಎಂತಲೇ ರಾಮಧ್ಯಾನ್ಯ ಚರಿತ್ರೆಯನ್ನು ಬರೆದರು. ಒಂದು ನೂರು ಐವತ್ತೆಂಟು ಭಾಮಿನಿಷಟ್ಪದಗಳಲ್ಲಿ ಹರಿದಿರುವ ರಾಮಧಾನ್ಯ ಚರಿತ್ರೆ ಮಹಾಭಾರತದ ರಾಮೋಪಖ್ಯಾನದಂತೆ ಚಿತ್ರಿತವಾಗಿದೆ. ಯುಧಿಷ್ಠಿರನಿಗೆ ಶಾಂಡಿಲ್ಯಮುನಿ ನರೆದಲೆಗ ವ್ರೀಹಿಯರ ನಡುವೆ ಬಂದ ಶ್ರೇಷ್ಠತೆಯ ಬಗೆಗಿನ ಭಿನ್ನಾಭಿಪ್ರಾಯದಲ್ಲಿ ಪ್ರಭುರಾಮಚಂದ್ರನು ರಾಗಿಯ ಪರವಾಗಿ ತೀರ್ಪು ನುಡಿದನೆಂದು ಹೇಳುತ್ತ ಇಡೀ ರಾಮಾಯಣವನ್ನು ಸಂಕ್ಷಿಪ್ತಗೊಳಿಸಿ ಹೇಳುವರು. ಸಪ್ತರ್ಷಿ ರಾಮಾಯಣದಂತೆ ಹಲವು ಸಂಘಟನೆಗಳನ್ನು ಒಂದೊಂದು ಪದ್ಯದಲ್ಲೂ ತಿಳಿಸುತ್ತಾ ರಾವಣ ವಧೆಯ ನಂತರ ವಿಭೀಷಣನಿಗೆ ಪಟ್ಟಗಟ್ಟುವವರಿಗೆ ಏಳೇ ಪದ್ಯದಲ್ಲಿ ಮುಗಿಸುವರು. ಇದಾದ ಮೇಲೆ ಸೀತಾ ಲಕ್ಷ್ಮಣ ಸಮೇತ ಅಯೋಧ್ಯೆಗೆ ಒಂದಿರುಗಬೇಕು ಶ್ರೀರಾಮ. ವಿಭೀಷಣ, ಸುಗ್ರೀವರೊಂದಿಗೆ ಸರ್ವದಾನವವಾನರ ಸೇನೆಯೊಂದಿಗೆ ಹಿಂದಿರುಗುತ್ತ ಮುಚುಕುಂದನ ಆಶ್ರಮಕ್ಕೆ ಬಂದಾಗ ಸಕಲ ಮುನಿಗಳೂ ಅಲ್ಲಿನೆರೆಯುವರು. ಇಲ್ಲಿ ವಾಲ್ಮೀಕಿಗೆ ತುಸು ವಿರಾಮ. ಪ್ರಕೃತರಾಗಿಯ ಕಥೆ ಬಿಚ್ಚಿಕೊಳ್ಳುತ್ತದೆ. ರಾಗಿಬತ್ತಗಳನ್ನು ಆರು ತಿಂಗಳ ನಂತರ ವಿಚಾರಿಸುವ • ತೀರ್ಮಾನ ಮಾಡಿ ಶ್ರೀರಾಮಚಂದ್ರ ಅಯೋಧ್ಯೆಗೆ ಮುಂದುವರಿಯುತ್ತಾನೆ. ಹನುಮಂತ ಮೊದಲು ಹೋಗಿ ಭರತನಿಗೆ ಸುದ್ದಿ ನೀಡುವುದು – ಶ್ರೀರಾಮ ಪಟ್ಟಾಭಿಷೇಕ ಎಲ್ಲವೂ ಆದಮೇಲೆ ಮತ್ತೆ ಕಥೆ ರಾಗಿಯತ್ತ ತಿರುಗುತ್ತದೆ. ರಾಗಿಯ ಹಿರಿಮೆಯನ್ನು ಎತ್ತಿ ಹಿಡಿದು 'ನರೆದಲೆಗ ನೀಬಾರೆನುತ ರಾಮ ನೃಪಾಲ ನೆರೆ ಮೆಚ್ಚಿ ಕರೆದು ಕೊಟ್ಟನು ತನ್ನ ನಾಮವ ಧರೆಗೆ ರಾಘವನೆಂಬ ಪೆಸರಾಯ್ತು'

ಕನಕದಾಸರಿಗೆ ಅವರ ಹುಟ್ಟು ಬೆಳವಣಿಗೆಗಳ ಹಿನ್ನೆಲೆಯಿಂದಾಗಿ ರಾಗಿಯ ಬಗ್ಗೆ ಅಭಿಮಾನವೆಂದು, ರಾಮಧಾನ್ಯ ಚರಿತ್ರೆ ಉಳ್ಳವರು ಇಲ್ಲದವರ ನಡುವೆ ನಡೆದ ಭಿನ್ನಾಭಿಪ್ರಾಯವೆಂದೂ, ರಾಗಿ ಜನಪದದ ಸಂಕೇತವೆಂದೂ ಹೇಳುವುದುಂಟು. ಏನೇ ಇರಲಿ ರಾಗಿಗೆ ರಾಘವ ಎಂಬ ಹೆಸರನ್ನು ನೀಡುವ ಕನಕದಾಸರ ಹೃದಯದಿಂದಾಗಿ ಮರ್ಯಾದಾ ಪುರುಷೋತ್ತಮ, ಪೂಜ್ಯ ಹಿರಿಯ – ಎಂದೆಲ್ಲ ಭಾವನೆಗಳಿಗೆ ಒಳಗಾಗಿ ಸಾಮಾನ್ಯಜನದಿಂದ ದೂರವಾಗುವ ಶ್ರೀ ರಾಮಚಂದ್ರನನ್ನು ಜನತೆಯ ಹತ್ತಿರಕ್ಕೆ ಕರೆತಂದು ಅವರ ದೈನಂದಿನ ಜೀವನದ ಅವಿಭಾಜ್ಯ ಅಂಗವಾಗಿ ಮಾಡುತ್ತದೆ; ರಾಮಧಾನ್ಯ ಚರಿತ್ರೆ. ಎಂತಲೇ ಇದು ಹರಿದಾಸ ಸಾಹಿತ್ಯದಲ್ಲಿ ಮಹತ್ವವನ್ನು ಪಡೆದುಕೊಳ್ಳುತ್ತದೆ.

ಕನಕದಾಸರು ಇನ್ನೊಮ್ಮೆ ಬ್ರಹ್ಮಲಿಖಿತವನ್ನು ಮೀರಿ ಬಾಳುವವರುಂಟು ಎಂಬುದನ್ನು ಹೇಳುತ್ತ ರಾಮಾಯಣದ ಒಂದು ಉದಾಹರಣೆ ನೀಡುತ್ತಾರೆ. ಜಾನಕಿಯನ್ನು ಬಿಡಬೇಕೆಂದು ಹೇಳಿದ ವಿಭೀಷಣನನ್ನು ರಾವಣನು ಸಭೆಯಲ್ಲಿ ನಿಂದಿಸಿದಾಗ ವಿಭೀಷಣನು ಬಂದು ರಾಮನನ್ನು ಶರಣಾಗುತ್ತಾನೆ. ಆಗ ರಾಮ ಅವನಿಗೆ ರವಿ ಶಶಿ ಪರ್ಯಂತ ಪಟ್ಟಗಟ್ಟಲಿಲ್ಲವೇ! (ಸಪ್ತ ಚಿರಂಜೀವಿಗಳಲ್ಲಿ ವಿಭೀಷಣನೂ ಒಬ್ಬ ಎಂಬುದು ಗಮನಾರ್ಹ) ಇದಕ್ಕೂ ಮುನ್ನ ರಾಮಾಯಣದ ಕರ್ತೃ ವಾಲ್ಮೀಕಿಯನ್ನು ಕುರಿತು ದಾಸರು ಹೇಳುವುದು ಇನ್ನೂ ಚೆನ್ನ;

( 24ನೇ ಪುಟ ನೋಡಿ )

# ವ್ಯಾಸರಾಯರು ಆಂಜನೇಯ

ಕನ್ನಡ ನಾಡಿನ ಭಕ್ತಿಪರಂಪರೆಯಲ್ಲಿ 'ಹರಿದಾಸರು' ವಹಿಸಿದ ಪಾತ್ರವು ಅತಿ ಪ್ರಮುಖವಾದದ್ದು ಹಾಗೂ ಅತ್ಯಂತ ಉಜ್ವಲವಾದದ್ದು. ಶ್ರುತಿ ಸ್ಮೃತಿ. ಪುರಾಣ. ಇತಿಹಾಸಗಳಲ್ಲಿ ಇವರು ಅಖಿಲವಾದ ಶ್ರದ್ಧೆಯುಳ್ಳವರಾಗಿದ್ದರು. ದ್ವೈತ ಸಿದ್ಧಾಂತದ ಅನುಯಾಯಿಗಳಾದ ಇವರಿಂದ ಸಂಸ್ಕೃತ ಭಾಷೆಯು ಪುನರುಜ್ಜೀವನಗೊಂಡಿತು. ಪ್ರಾದೇಶಿಕ ಭಾಷೆಯಾದ ಕನ್ನಡದ ಬಗೆಗಿನ ಇವರ ಅಭಿಮಾನ ಹೊಸ ಅಲೆಯನ್ನು ನಾಡಿನ ಸಾಹಿತ್ಯ ಸಾಗರದಲ್ಲೆಬ್ಬಿಸಿತು. ಭಕ್ತಿಗೆ ಪ್ರಾಮುಖ್ಯತೆ ದೊರೆತು ಭಗವಂತನ ಸಖ್ಯಕ್ಕೆ ಸುಲಭ ಮಾರ್ಗವೊಂದು ಸಿದ್ಧವಾಯಿತು. ಇಂತಹ 'ನೂತನ ಪಂಥ'ವೊಂದರ ಸತ್ತ್ವಶಾಲಿ ಸಾಹಿತ್ಯದ ಪ್ರತಿನಿಧಿಯಾಗಿ 'ಕೀರ್ತನೆ'ಗಳು ಇಂದಿಗೂ ಜನ ಮನದಲ್ಲಿ ಉಳಿದಿವೆ; ಕನ್ನಡ ನಾಡಿನ ಉದ್ದಗಲಕ್ಕೂ ಹರಡಿವೆ. 'ಕೀರ್ತನೆ'ಗಳ ಸಂಪತ್ತಿನಿಂದ ಜನಜೀವನವು ಉನ್ನತಿ ಹೊಂದಿದೆ.

ಹರಿದಾಸರು ದ್ವೈತ ಸಂದೇಶ ಪ್ರಸಾರಕ್ಕಾಗಿ, ಶ್ರೀಕೃಷ್ಣಪರಮಾತ್ಮನ ಭಕ್ತಿಯನ್ನು ಹರಡುವುದಕ್ಕಾಗಿ, ಕೀರ್ತನೆಗಳನ್ನು ಬಳಸಿಕೊಂಡ ಸಂತರೂ ಆಗಿದ್ದಾರೆ. ಹರಿನಾಮ ಸಂಕೀರ್ತನೆಯನ್ನು ನಿತ್ಯಕೈಂಕರ್ಯವನ್ನಾಗಿಸಿಕೊಂಡ ಇವರಿಗೆ ಹರಿಭಕ್ತಿ ಪ್ರಸಾರವು ಜೀವನೋದ್ದೇಶವೂ ಆಗಿದೆ. ಆತ್ಮ ಸಾಕ್ಷಾತ್ಕಾರಕ್ಕೆ ಸಂಗೀತವೇ ಸಾಧನವೆಂದು ನಂಬಿದ್ದ ಇವರು ರಾಗ, ತಾಳ, ಶ್ರುತಿಗಳಲ್ಲಿ ಪರಿಶ್ರಮವನ್ನು ಹೊಂದಿದವರಾಗಿದ್ದರು. 'ಸಂಗೀತವು ದೇವರ ಭಾಷೆ, ಸಂಗೀತ ರಸಿಕರಲ್ಲದವರು ಮೋಕ್ಷಸಾಧಕರಾಗುವಂತಿಲ್ಲ'– ಎಂಬ ಇವರ ಸಂದೇಶದಲ್ಲಿ 'ನಾದ ಮಾಧುರ್ಯ'ಕ್ಕಿದ್ದ ಮಹತ್ತ್ವವು ಅರಿವಾಗುತ್ತದೆ. ಇದನ್ನೇ ಇವರು ಎಲ್ಲೆಡೆಗಳಲ್ಲಿ ಬೋಧಿಸಿದರು. ಇಂತಹ 'ಕೀರ್ತನ ಪರಂಪರೆ'ಯ ವಾಹಿನಿಯ ಪ್ರಮುಖರಾಗಿ ವ್ಯಾಸರಾಯರು (ಕಾಲ ಕ್ರಿ. ಶ. 1447–1539) ಪಡೆದಿರುವ ಸ್ಥಾನವು ಅದ್ವಿತೀಯವಾದುದಾಗಿದೆ.

**ಶ್ರೀ ಕೆ. ಆರ್. ನರಸಿಂಹನ್, ಎಂ.ಎ.**

ವ್ಯಾಸರಾಯರು ಕೃಷ್ಣನ ಪರಮ ಭಕ್ತರು. ವಿಜಯನಗರದ ಅರಸನಾದ ಕೃಷ್ಣದೇವರಾಯನಿಗೆ ಇವರು ಗುರುಗಳು. ವಿಜಯನಗರದ ಸುನೇತನಕ್ಕೆ ಇವರು ರಾಜಗುರುಗಳಾಗಿದ್ದವರು. ಹಿಂದೂ ಧರ್ಮದ ಪುನರುದ್ಧಾರಕರೂ ಆದ ಇವರು 'ತಿರುಪತಿ ತಿಮ್ಮಪ್ಪ'ನ ಅರ್ಚಕರಾಗಿ ಸೇವೆ ಸಲ್ಲಿಸಿದ್ದಾರೆ. ವಿಜಯನಗರದ ರಾಜಧಾನಿಯಲ್ಲಿ ವೈಷ್ಣವ ದೇವಾಲಯಗಳನ್ನು ಕಟ್ಟಿಸಿದ ಕೀರ್ತಿಯೂ ಇವರಿಗಿದೆ.

ಮಧ್ವಾಚಾರ್ಯರ ಪರಂಪರೆಯಲ್ಲಿ ಬಂದ ವ್ಯಾಸರಾಯರು ತಾವು ಸಂಚರಿಸಿದ ಎಡೆಗಳಲ್ಲೆಲ್ಲ ಹನುಮಂತನ ಮೂರ್ತಿಗಳನ್ನು ಪ್ರತಿಷ್ಠೆ ಮಾಡುತ್ತ ಬಂದರು. ಮುಳಬಾಗಿಲಿನ ನೃಸಿಂಹ ತೀರ್ಥದಲ್ಲಿ ಹದಿನೈದನೆ ಶತಮಾನದಲ್ಲಿ ಇವರು ಪ್ರತಿಷ್ಠೆ ಮಾಡಿದ ವೀರಾಂಜನೇಯ ಮೂರ್ತಿಯು ಇಂದಿಗೂ 'ಆರಾಧನೆ'ಯುಳ್ಳದ್ದಾಗಿದೆ. ಹಾಗೆಯೇ ಇವರ 'ಕೀರ್ತನೆ'ಗಳಲ್ಲಿ ಹನುಮಂತನ ಪ್ರಸ್ತಾಪ ಸ್ವಲ್ಪ ಹೆಚ್ಚು ವಿವರವಾಗಿಯೇ ಕಂಡುಬರುತ್ತಿದೆ. ಶ್ರೀ ಕೃಷ್ಣನ ಅಂಕಿತದಲ್ಲಿ ಬರೆದಿರುವ 'ಹಾಡು'ಗಳಲ್ಲಿ ಹನುಮಂತನ ಬಗ್ಗೆ ಶ್ರದ್ಧೆ – ಸ್ತೋತ್ರಗಳು ತುಂಬಿ ಬಂದಿವೆ.

ಮರ್ಕಟೇಶ ಮಹೋತ್ಸಾಹ  
ಸರ್ವ ಶೋಕ ವಿನಾಶನ ।  
ಶತ್ರೂನ್ ಸಂಹರ ಮಾಂ ರಕ್ಷ  
ಕ್ಷಿಪ್ರಂ ದಾಪಯ ಮೇ ಪ್ರಭೋ ॥

ಕನ್ನಡ ನಾಡಿನಲ್ಲಿ ವಿಶೇಷವಾಗಿ ಪೂಜೆಗೊಳ್ಳುತ್ತಿರುವ ದೇವತೆ ಯೆಂದರೆ ಹನುಮಂತ. ನಮ್ಮ ನಾಡಿನ ಮೂಲೆ ಮೂಲೆಗಳಲ್ಲೂ ಆಂಜನೇಯನ ಸಣ್ಣ – ದೊಡ್ಡ, ಪ್ರಾಚೀನ–ನವೀನ ಗುಡಿಗಳು ವ್ಯಾಪಿಸಿ ನಿಂತಿರುವುದಾಗಿವೆ. ಹಿಂದು ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಮಾತ್ರ ಪ್ರಸಿದ್ಧವಾದ ಹನುಮಂತನ ಆರಾಧನೆ ಇಂದು ಇಡೀ ಭಾರತದಲ್ಲಿಯೇ ಎಂಬಂತೆ ವ್ಯಾಪಿಸಿಕೊಂಡಿದೆ. ಹನುಮಂತನನ್ನು ಕರ್ನಾಟಕದವರು ತಮ್ಮವನೆಂದು ಭಾವಿಸಿದ್ದಾರೆ.

ಮಾಧ್ವ ಸಂಪ್ರದಾಯದಲ್ಲಿ ಪ್ರಾಣದೇವರಿಗೆ ಇರುವಷ್ಟು ಪ್ರಾಶಸ್ತ್ಯ ಮತ್ತಾವುದೇ ವೈದಿಕ ಮತದಲ್ಲಿಲ್ಲ. ಮಧ್ವಾಚಾರ್ಯರನ್ನು ಪ್ರಾಣದೇವರ ಅವತಾರವೆಂದೇ ಬಗೆಯಲಾಗಿದೆ. ಹನುಮಂತನ ಪೂಜೆ ಈ ಸಂಪ್ರದಾಯಸ್ಥರಲ್ಲಿ ಹೆಚ್ಚಾಗಿಯೇ ಪ್ರಚಲಿತವಾಗಿದೆ. ಇದರ ಪ್ರಭಾವದಿಂದಾಗಿಯೇ ಕನ್ನಡ ನಾಡಿನಲ್ಲಿ 'ಆಂಜನೇಯ' ಮೂರ್ತಿಗಳು ಹಾಗೂ ಅದಕ್ಕೆ ಸಂಬಂಧಿಸಿದ ಗುಡಿಗಳು ತುಸು ಅಧಿಕವಾಗಿಯೇ ಕಂಡು ಬರು



ತ್ತದೆನ್ನಬಹುದು. ಇಂತಹ ವಿಖ್ಯಾತವಾದ ಸಂಪ್ರದಾಯದಲ್ಲಿ ನಡೆದು ಬಂದ ವ್ಯಾಸ ರಾಯರು ಹನುಮಂತನನ್ನು ವಾತಜಾತ, ಮುಖ್ಯಪ್ರಾಣ, ಮುಂತಾದ ಹೆಸರುಗಳಿಂದ ಕರೆದು ಪೂಜಿಸಿರುತ್ತಾರೆ. ಇವರ 'ದೇವತಾ ಸ್ಮರಣೆ'ಯ ಮಾಲಿಕೆಯಲ್ಲಿ ಈತನಿಗಿತ್ತಿರುವ ಸ್ಥಾನವೂ ಮಿಗಿಲಾಗಿಯೇ ಇದೆ.

ಕ್ಷೀರನದೀ ತೀರದಲಿ ನೆಲಸಿಹ |
ಮಾರುತಾವತಾರ ಹನುಮ ||

– ಎಂಬಲ್ಲಿ ಆಂಜನೇಯನನ್ನು ಕಂಡಿರುವ ಚಾರಿತ್ರಿಕ ದೃಷ್ಟಿ ಈತನ ಪ್ರಾಮುಖ್ಯತೆಯನ್ನು ನಿರೂಪಿಸುವಂತಿದೆ. (ಕ್ಷೀರನದಿ ಎಂಬುದು 'ಪಾಲಾರ್' ನದಿಯ ಸಂಸ್ಕೃತ ರೂಪವೇ ಆಗಿರಬೇಕು.) ಇವರು ಚಿತ್ರಿಸಿರುವ ಕಪಿವೀರನ ರೂಪವಾದರೂ ಎಂತಹುದು !

ಕಣಕಾಲಂದಿಗೆ ಒಪ್ಪುವ ಸರ
ಕಂಠಮಣಿಯ ವಜ್ರದ ಕಣಿಯ |
ಮಂದಸ್ಮಿತಯುತ ಕುಂದ ಕುಟ್ಮಲ
ಸಮ ರದನ ಪೂರ್ಣಚಂದ್ರವದನ ||

ಹೀಗಿರುವ ಆಂಜನೇಯ ದುರಿತ ಮಾರ್ತಾಂಡನೂ ಆಗಿದ್ದಾನೆ.

ಅಂಜನೆಯ ಮಗನೂ, ರುದ್ರಾಂಶ ಸಂಭೂತನೂ, ವಾಯು ಪುತ್ರನೂ ಆಗಿರುವ ಈತನ ಸಾಹಸಗಳಿಗೆಣೆಯುಂಟೇ !

ವಾತಸುತನಾಗಿ ರಘುನಾಥ
ಪ್ರಿಯದೂತ ಬಲು |
ಯೂಥ ಲಂಕೆಯನು
ಪೊಕ್ಕು ಖ್ಯಾತಿಯನು ಪಡೆದೆ ||

ಎಂಬ ಕಡೆಯಲ್ಲಿ 'ದೂತಕಾರ್ಯ' ಪ್ರವೃತ್ತನಾದ ಹನುಮಂತನನ್ನು ಕಂಡಿದ್ದಾರೆ.

" ಸಿಂಧು ಲಂಘಿಸಿ ಖಳರ ವನವ
ಭಂಗಿಸಿ ಸೀತೆ

ಗುಂಗುರವ ಕೊಟ್ಟ ಪ್ರಾಣದೇವನ"
– ಚಿತ್ರಣವೊಂದು ಕಡೆಯಿದ್ದರೆ
ಮತ್ತೊಂದು ಕಡೆ ಕಾಣುವ;

"ಹರಿಗೆ ಚೂಡಾಮಣಿಯನಿತ್ತು
ಹರಿಗಳ ಕೂಡಿ ।
ಶರಧಿಯನು ಕಟ್ಟಿ ಅರಿ
ಬಲವ ಕುಟ್ಟಿ"

– ಕೆಡವಿದ ಹನುಮಂತನ ಅಪೂರ್ವ ರೂಪ ವನ್ನು ಕಾಣುತ್ತೇವೆ.

ಅಂಬುಧಿಯ ಲಂಘಿಸಿ ಭರದಿ
ಲಂಬ ಶಿಖರದಿಂದ ಧುಮುಕಿ
ಸಂಭ್ರಮದಿಂದ ಲಂಕೆಗೆ ಪೋದ

– ಹನುಮಂತನು ಶರದಿ ದಾನವರನು 'ಸವರಿ' ಶರಧಿಯನುತ್ತರಿಸಿದವನಾಗಿದ್ದಾನೆ.

"ವಾರಿಧಿಯನು ಗೋಷ್ಪಾದ
ನೀರಂತೆ ದಾಟ್ಯೆಂದು ।
ವಾರುಮಲೆತಕ್ಷನನು
ಮುರಿದು ಮೆರೆದವನೂ"

– ಈ ಹನುಮಂತನೇ ಆಗಿದ್ದಾನೆ.

(ಅಕ್ಷಯ ಕುಮಾರನು ಮಂಡೋದರೀ ರಾವಣರ ಕಿರಿಯ ಮಗ. ಹನುಮಂತ ಸೀತೆಯನ್ನು ಹುಡುಕಲು ಲಂಕೆಗೆ ಹೋಗಿದ್ದಾಗ ಇವನನ್ನು ಕೊಂದನೆಂಬ ವಿಚಾರವು ರಾಮಾಯಣದ 'ಸುಂದರಕಾಂಡ'ದಲ್ಲಿ ಬಂದಿರುತ್ತೆ.)

ಆಂಜನೇಯ ಬೆಟ್ಟವನ್ನು ಹೊತ್ತು ನಿಂತವನಂತೆ ಚಿತ್ರಿತನಾಗಿರುತ್ತಾನೆ. ಈ ಘಟನೆ ರಾಮಾಯಣದಲ್ಲಿ ಪ್ರಸಿದ್ಧವಾಗಿದೆ. ಇದನ್ನು ವ್ಯಾಸರಾಯರು ಹಾಡಿರುವ ರೀತಿ ಇಲ್ಲಿದೆ;

ಉರಗ ಬಂಧನದಿಂದ
ಕಪಿವರರು ಮೈಮರೆಯೆ !
ಗಿರಿಯ ಸಂಜೀವನವ
ತಂದು ಬದುಕಿಸಿದೆ ॥

ಇಂತಹ ಕಪಿಶ್ರೇಷ್ಠನು –

ದಾನವನ ಶೋಕವನ
ಕಿತ್ತು ಈಡ್ಯಾಡಿಂದು
ಶ್ರೀನಾಥಗೆನುತ ಲಂಕೆಯನುರುಹಿದ ॥

ಇದನ್ನು ಇಂದಿನ ದೃಷ್ಟಿಗೆ ಹೊಂದುವಂತೆ,

ಮಾನವರ ಶೋಕವನ ಬೇರೊರಸೆ ಕಿತ್ತು
ದಾನವರಿಹ ಪುರವ ಪೂರ್ತೈಸಿ ಸುರಿದನ

- ಎಂದಿರುವ ವ್ಯಾಖ್ಯಾನ ಸುವಿದಿತವಾಗಿದೆ.

ಆಂಜನೇಯನೇ 'ದ್ವಾಪರ'ದಲ್ಲಿ ಭೀಮನೆಂದು ಪ್ರಸಿದ್ಧನಾದವನಾಗಿದ್ದಾನೆ. 'ಜಯ ಭೀಮ'ನೆಂಬ ಸಂಬೋಧನೆ ಈ ಸಂದರ್ಭದಲ್ಲಿ ಅರ್ಥವತ್ತಾಗಿದೆ.

ದುರುಳ ಕೌರವನನುಜನುರವ
ಕರದಿ ಸೀಳಿ ರಕ್ತವ ಸುರಿದು ।
ನರಸಿಂಹನಿಗೆ ಅರ್ಪಿಸಿದ
ಧರೆಗೆ ಭೀಮನೆನಿಸಿದಾತ

– ಹನುಮಂತನೇ ಅಲ್ಲದೆ ಮತ್ತಾರೂ ಅಲ್ಲ ವೆಂಬ ಅಭಿಪ್ರಾಯ ಇಲ್ಲಿದೆ.

ದ್ವಾಪರಾಂತ್ಯದಿ ಪಾಂಡು
ಭೂಪಾತ್ಮಜ ನೆನಿಸಿ
ಶ್ರೀಪಾರ್ಥಸಾರಥಿಯ ಭಜಕ ನೀನಾದೆ

–ಎಂಬಲ್ಲಿ ಹರಿಯ ನಾಮಸ್ಮರಣೆಯೂ ಸೇರಿಕೊಂಡಿದೆ. 'ಸರ್ವದೇವ ನಮಸ್ಕಾರಂ ಕೇಶವಂ ಪ್ರತಿಗಚ್ಛತಿ' ಅಲ್ಲವೆ!

ಇಂತಹ ಭೀಮನನ್ನು ಕುರಿತು

ಪಾಪಿ ಮಾಗಧ ಬಕರ
ಕೀಚಕ ಹಿಡಿಂಬಕರ ।
ಕೋಪದಿಂದಲಿ ತರಿದೆ
ಮೂಜಗದಿ ಮೆರೆದೆ ॥

– ಎಂದು ಹಾಡಿ

ಉರವ ತಪ್ಪಿಸಿ ಕೌರವನ
ತೊಡೆಗಳನು ಮುರಿದೆ ।
ಹರಿಯ ಕಿಂಕರ ದುರಂಧರ
ಗಾರು ಸರಿಯೆ ॥

ಎಂಬುದಾಗಿ ನಿರ್ವಹಿಸಿದ್ದಾರೆ.

ಆಂಜನೇಯನ ಮತ್ತೊಂದು ಅವತಾರ ಮಧ್ವಾಚಾರ್ಯರು.

ಕಲಿಯುಗದಲಿ ಮಧ್ಯಗೇಹಾಭಿದಾನದಲಿ ।
ತುಳುವ ಬ್ರಾಹ್ಮಣರಲಿ ಅವತರಿಸಿ ॥

ಮಧ್ವಾಚಾರ್ಯರಾಗಿ ಹನುಮಂತನೇ ಧರೆಗಿಳಿದು ಬಂದು–

ಬಳಿಕ ಇಪ್ಪತ್ತೊಂದು ದುರ್ಭಾಷ್ಯಂಗಳ ।
ಹಳಿದು ವೇದಾಂತ ಶಾಸ್ತ್ರಗಳಲಿ ॥

– ವೈಷ್ಣವ ಮತವನ್ನು ಉಳುಹಿಸಿದ ಮಧ್ವೇಶರಾಗಿದ್ದಾನೆ.

ಹೀಗೆ ಹನುಮಂತನೇ ಜಯ ಭೀಮನಾಗಿ, ನಂತರದಲ್ಲಿ ಮಧ್ವೇಶರಾಗಿ ಅವತರಿಸಿದನೆಂಬ ಮಾಧ್ವಸಿದ್ಧಾಂತವನ್ನು 'ನಾಟಿ' ರಾಗದಲ್ಲಿ, ಜನರ ಮನಸ್ಸಿನಲ್ಲಿ ನಾಟುವಂತೆ ಹಾಡಿರುವ ವ್ಯಾಸರಾಯರು 'ಆಂಜನೇಯ'ನಿಗೆ ಕೀರ್ತನ ಸಾಮ್ರಾಜ್ಯ ಮುಕುಟವನ್ನು ತೊಡಿಸಿದ್ದಾರೆ.

ವ್ಯಾಕರಣ ವಿಶಾರದನೆಂದೂ, ಸಂಗೀತ ಮತವೊಂದರ ಪ್ರವರ್ತಕನೆಂದೂ ಹನುಮಂತನನ್ನು ನಂಬಲಾಗಿದೆ. ಜೊತೆಗೆ ಯೋಗಾಭ್ಯಾಸವನ್ನೂ ಸಹಾ ಇವನಿಗೆ ಅಂಟಿಸಿದ್ದಾರೆ. ಇಂತಹವನು ವ್ಯಾಸರಾಯರೇ ಹೇಳುವಂತೆ,

ಮೂಲ ರಾಮಾಯಣವ
ಪಾಡಿ ಪಾಡಿದೆ ಅಂದು ।
ಓಲಾಡಿ ಹರಿಭಕ್ತಿ ಸಾಗರದೊಳು ॥
ಮೂಲೋಕದೊಳಗೆಲ್ಲ
ಅದರ ಸಾರವ ಬೀರಿ ।
ತೇಲಿಸಿದೆ ಭವಾಬ್ಧಿ ಮಗ್ನ
ಜನಗಳನಿಂದು ॥

ಹೀಗೆ ಈತನೊಬ್ಬ ರಕ್ಷಕ ಉದ್ಧಾರಕ. 'ಓಂ ನಮೋ ಭಗವತೇ ಆಂಜನೇಯ ಮಹಾ ಬಲಾಯ ಸ್ವಾಹಾ'– ಎಂಬ ಆಂಜನೇಯನನ್ನು ಕುರಿತ ಮೂಲ ಮಂತ್ರದ ಉಲ್ಲೇಖದಲ್ಲಿ ಆತನ ಶಕ್ತಿ – ಪ್ರಸಕ್ತಿಗಳು ಅಡಕವಾಗಿವೆ.



( 18ನೇ ಪುಟದಿಂದ )

ಉದ್ವೇಗವನ್ನು ಯಾರು ತಾನೆ ಬಣ್ಣಿಸಲು ಸಾಧ್ಯ ? ಅಗ್ರಜನ ದರ್ಶನವಾದ ಹೊರತು ಆತನಿಗೆ ಶಾಂತಿ ಇಲ್ಲ. ಚಿತ್ರಕೂಟ ಪರ್ವತದ ಮೇಲೆ, ಜಟಾಮಂಡಲಧಾರಿಯಾಗಿ, ಕುಳಿತಿರುವ ರಾಮನನ್ನು, ಭರತ ದೂರದಿಂದಲೇ ಕಂಡ. ಅಲ್ಲೊಂದು ಪರ್ಣಶಾಲೆ. ಹೆಡೆ ಎತ್ತಿನಿಂತಿರುವ ಮಹಾಸರ್ಪಗಳಂತೆ, ಶತ್ರುಭೀಕರವಾದ, ಪ್ರಳಯೋಗ್ರ ಕಾರ್ಮುಕಗಳು ಅಲ್ಲಿ ಗೋಡೆಗೊರಗಿಸಲ್ಪಟ್ಟವೆ. ಬುಸುಗುಟುತ್ತಿರುವ ಹಾವುಗಳಂತೆ, ಬತ್ತಳಿಕೆಯಲ್ಲಿ ತೇಜೋಮಯವಾದ ಬಾಣಗಳು. ಅನತಿ ದೂರದಲ್ಲಿ ವಿಶಾಲ ವೇದಿಕೆ. ತತ್ಸಮೀಪದಲ್ಲಿ ಹೋಮಕುಂಡ; ಧಗಧಗನೆ ಉರಿಯುವ ಹುತಾಶನ ಜ್ವಾಲೆ – ಅಲ್ಲಿ ಕುಳಿತಿರುವ ರಾಮಚಂದ್ರ, ವಲ್ಕಲ ಧಾರಿಯಾಗಿದ್ದಾನೆ. ಪುಣ್ಯಜಲಾಭಿಷಿಕ್ತವಾಗಬೇಕಾಗಿದ್ದ ಸಿರಿಮುಡಿ ಜಟಾಮುಕುಟ ಶೋಭಿತವಾಗಿದೆ. ಆತನ ಪ್ರದೀಪ್ತ ಗಂಭೀರ ಮುಖಮಂಡಲ, ತಪಸ್ತೇಜೋಭಿಮಂಡಿತವಾಗಿದೆ. ಪಾವಕೋಪಮಂ – ಆದ ತೇಜೋವಿರಾಜಿತ ಸ್ಮಶ್ರುಭೀಷ್ಮಾನನ ಸಿಂಹ ಸ್ಕಂಧಂ, ಮಹಾಬಾಹುಂ ಆಗಿರುವ ಪುಂಡರೀಕ ನಿಭೇಕ್ಷಣನಾದ ರಾಮ ಹೇಗೆ ಕುಳಿತಿದ್ದಾನೆ? 'ಉಪವಿಷ್ಟಂ ಮಹಾಬಾಹುಂ – ಬ್ರಹ್ಮಾಣಮಿವ ಶಾಶ್ವತಂ – ಎಂದಿದ್ದಾನೆ – ಭವಪ್ಯತ್ಯವಿಸಂದೋಹ ಮಾರ್ಗದರ್ಶಿಯಾದ ಕವಿಪುಂಗವ. ಶಾಶ್ವತ ಪರಬ್ರಹ್ಮನಂತೆ ಕುಳಿತಿದ್ದಾನೆಂಬ ಉಪಮೆಯ ಔಚಿತ್ಯ–ಗಾಂಭೀರ್ಯಗಳು ಧ್ಯಾನ ಯೋಗ್ಯವಾಗಿದೆ– ಚಿನ್ತನ ಯೋಗ್ಯವಾಗಿದೆ! ನನ್ನನ್ನು ದಶರಥಪುತ್ರ ಎಂದು ಭಾವಿಸಿರಿ – ಎಂದು ರಾಮನೇ ಹೇಳಿದ್ದರೂ ಸಹ, ಆತ ಪರಬ್ರಹ್ಮ ವಸ್ತುವೆಂಬುದು ನಿರ್ವಿವಾದ; ಅದು ಪರಂಪರಾಗತವಾಗಿ ಬಂದಿರುವ ಶ್ರದ್ಧೆ. ದರ್ಭಾಸನದ ಮೇಲೆ ಕುಳಿತಿರುವ ದಾಶರಥಿಯ ಗಾಭೀರ್ಯ, ಔನ್ನತ್ಯ– ಮಹಿಮೋನ್ನತಿ ಎಲ್ಲವೂ ಈ ಉಪಮೆಯ ಹಿಂದೆ ಅಡಗಿದೆ. ನಿರ್ಗುಣ ಬ್ರಹ್ಮವಸ್ತು, ಸಗುಣ ಸಾಕಾರ ಬ್ರಹ್ಮನಾಗಿ ಕುಳಿತಿದೆ. ಭಕ್ತಾನುಕಂಪವೇ ಮೂರ್ತೀಭವಿಸಿದಂತೆ!! ಭರತನ ಭಾಗ್ಯವೇ ಭಾಗ್ಯ!! ಈ ಉಪಮೆಯ ಸೊಗಸು ಮಾತಿಗೆ ಮೀರಿದ್ದು.

ವಾಲ್ಮೀಕಿಯ ಕಾವ್ಯ ಆದಿಕಾವ್ಯ – ನವರಸ ಭರಿತ ಕಾವ್ಯ – ಭಾರತೀಯ ಸಂಸ್ಕೃತಿಯ ಪ್ರತಿನಿಧಿಕಾವ್ಯ – ಪುಣ್ಯಪ್ರದವಾದ, ಆನಂದದಾಯಕವಾದ ಧಾರ್ಮಿಕಕಾವ್ಯ. ಈ ಅದ್ವಿತೀಯ ಮಹಾಕಾವ್ಯದಲ್ಲಿ ಉಪಮೆಗಳು ಅತಿ ಸುಂದರ ಆಗದೆ ಮತ್ತೇನು ?

ವನ್ದೇವಾಲ್ಮೀಕಿ ಕೋಕಿಲಂ
ಸ್ತುತ್ಯಂ ತತ್ಕಾವ್ಯ ವೈಭವಂ ★

( 20ನೇ ಪುಟದಿಂದ )

ಪಾಪಕೆ ಹೇಸದ ಶಬರ ಒಟ್ಟೆಯನು
ಕಾದಿರಲು
ಆ ಪಥದೆ ಸಲೆ ವೈಷ್ಣವನು ಬರಲು
ಪಾಪವನು ತಪಿಸಿ ರಾಮನಾಮವ
ಕೊಡಲು
ಕಾಪಥಕ ವಾಲ್ಮೀಕಿ ಮುನಿಯಾಗ
ಲಿಲ್ಲವೇ ?

ರಾಮನಾಮವನ್ನು ಜಪಿಸಿದವರಿಗೆ ಭವ ಬಂಧನವು ಇಲ್ಲವೇ ಇಲ್ಲವೆಂದು ಹರಿದಾಸ ಶ್ರೇಷ್ಠರಾದ ವರದ ಗೋಪಾಲವಿಠಲದಾಸರು ಒಂದು ಕೀರ್ತನೆಯಲ್ಲಿ ತಿಳಿಸಿದ್ದಾರೆ.

ರಾಮನಾಮ ಭಜಿಸಿದವಗೆ ಉಂಟೆ
ಭವದ ಬಂಧನ ಶ್ರೀ– | || ಪ ||

ಕಾಮಹರನ ಸತಿಯು ಸದಾ
ನೇಮದಿಂದ ಭಜಿಸುವ ||

........................................

ಕರಿವರ ಪ್ರಹ್ಲಾದ ದ್ರೌಪದಿ
ವರವಿಭೀಷಣರೆಲ್ಲರು |
ಹರಿಯ ಸ್ಮರಣೆಮಾಡಿ ಸುಖ ಭರಿತ
ರಾಗಲಿಲ್ಲವೆ ||

ಸಂಪೂರ್ಣ ರಾಮಾಯಣವನ್ನು ಸುಲಭ ಕನ್ನಡ ಭಾಷೆಯಲ್ಲಿ ಹರಿದಾಸ ಪಂಥದಲ್ಲಿ ಬಾಳಿ ಬೆಳಗಿದ 'ಮೋಹನ ವಿಠಲದಾಸರು' ಸಂಕ್ಷಿಪ್ತವಾಗಿ ಸಾಮನ್ಯಜನರಿಗೆ ಅರ್ಥವಾಗುವಂತೆ ಕೀರ್ತನೆ ರೂಪದಲ್ಲಿ ರಚಿಸಿರುವರು.

ತಾರಮ್ಮಯ್ಯ ರಘುಕುಲ ರಾಮ
ಚಂದಿರನ || ಪ ||
ಈರೇಳು ವರುಷವು ಮೀರಿ
ಹೋಗುತಲಿದೆ |
ಸೇರದನ್ನೋದಕ ಮಾರಪಿತನ ಕರೆ
| ಅ. ಪ ||

ಪರ್ಣಶಾಲೆಯಂತೆ ಅಲ್ಲಿ ಸು –
ವರ್ಣದ ಮೃಗವಂತೆ |
ಕನ್ಯೆ ಸೀತಾಂಗನೆ ಬಯಸಿದಳಂತೆ |
ಸ್ವರ್ಣಾಂಬರ ಬೆನ್ನಟ್ಟಿ ಪೋದನಂತೆ
ಲಕ್ಷ್ಮಣ ಅಲ್ಲಿಂದ ಪೋಗಲು
ತಕ್ಷಣ ಖಳ ಬಂದು
ಲಕ್ಷ್ಮೀಯಾಕೃತಿಯ ಕೊಂಡು
ಪೋಗೆ ಕಮ –
ಲೇಕ್ಷಣ ಹೊರಟನು ಆಕ್ಷಣವಲ್ಲಿಗೆ || ೨ ||

ಈ ಹಾಡನ್ನು ಇಂದಿಗೂ ಮಕ್ಕಳಿಗೆ ಲಾಲಿಯನ್ನ ಹೇಳುವಾಗ ಕನ್ನಡದ ಹೆಂಗಳೆಯರು ಹಾಡುವುದು ಕಂಡು ಬರುತ್ತದೆ. ಲೇಖಕರ ಪರಿಚಯವಿಲ್ಲದಿದ್ದರೂ ಕೀರ್ತನೆಯ ಪರಿಚಯವಿರುವರು ಹೆಚ್ಚು.

ಇದೇ ಪ್ರಕಾರ ದಾಸಕೂಟದಲ್ಲಿ ಬಂದಂತಹ 'ವರದೇಶ ವಿಠಲರು' ಶ್ರೀರಾಮಕೃಷ್ಣ ಸ್ಮರಣೆ ಎಂದು ಬಹು ಸುಂದರವಾಗಿ, ನಿತ್ಯ ಪಾರಾಯಣಕ್ಕೂ ಅನುಕೂಲವಾಗುವಂತೆ ಶ್ರೀರಾಮ ಮತ್ತು ಶ್ರೀಕೃಷ್ಣರ ಮುಖ್ಯ ಘಟ್ಟಗಳನ್ನು ತಿಳಿಗನ್ನಡದಲ್ಲಿ ಈ ರೀತಿಯಾಗಿ ಚಿತ್ರಿಸಿದ್ದಾರೆ. ( ಈ ಕೀರ್ತನೆಯಲ್ಲಿ ವರದೇಶ ವಿಠಲರು ರಾಮಕೃಷ್ಣರಿಗಿರುವ ಅಭೇದವನ್ನು ಸೂಚಿಸಿರುವರು. )

ರಾಮ ಹರೇ ಹರೆ ರಾಮ ಹರೇ |
ಕೃಷ್ಣ ಹರೇ ಹರೇ ಕೃಷ್ಣ ಹರೆ ||
ಶಿಲೆಯ ಪಾದರಜದಿ ಸ್ತ್ರೀಮಾಡಿದ |
ಸುಲಲಿತ ಗುಣನಿಧಿ ರಾಮಹರೇ ||

ಒಲವಕ್ರಾಗಿದ್ದ ಬಲೆಯಕ್ಷಣದಲಿ |
ಚೆಲುವೆಯ ಮಾಡಿದ ಕೃಷ್ಣ ಹರೇ ||

ಸಂಪೂರ್ಣ ರಾಮಾಯಣದಲ್ಲಿರುವ ಬಾಲಕಾಂಡ, ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರಕಾಂಡ, ಯುದ್ಧಕಾಂಡ, ಉತ್ತರಕಾಂಡಗಳ ಕಥಾಂಶಗಳನ್ನು ಹರಿದಾಸ ಪಂಥದಲ್ಲಿ ಬಂದ ಗುರು ಜಗನ್ನಾಥದಾಸರು ( ಕೋಸಿಗಿ ಮುತ್ಯ ) ಕಾಂಡಗಳ ಕ್ರಮದಲ್ಲಿ ಮನೋಹರವಾಗಿ ಹಾಡಲು ಅನುಕೂಲವಾಗಿ ಒಂದು ಸುದೀರ್ಘವಾದ ಕೀರ್ತನೆ ರಚಿಸಿರುವರು.

ಪ್ರತಿ ಚರಣವೂ 'ರಾಮ' ಎಂಬುದರಿಂದ ಕೊನೆಯಾಗುವಂತೆ ರಚಿಸಲಾಗಿರುವ ಈ ಕಥನ ಕೀರ್ತನ ಹಾಡಲು ಸುಲಭವಾಗಿ ಸುಲಭ ಲಯಕ್ಕೆ ಒಗ್ಗಿ, ಸುಸಂಕೇತವಾಗಿದೆ.

———

## ಕಿಶೋರ ಜಗತ್

ಮಿಥಿಲೆಯಲ್ಲಿ ಜನಕ ಮಹಾರಾಜನು ದೊಡ್ಡ ಯಾಗವೊಂದನ್ನು ಕೈಗೊಂಡಿದ್ದನು. ಅದಕ್ಕಾಗಿ ದೇಶದ ಬೇರೆ ಬೇರೆ ಭಾಗಗಳಿಂದ ನೂರಾರು ಜನ ಬಂದರು. ಋಷಿ ಮುನಿಗಳಿಂದ, ಧಾರ್ಮಿಕರಿಂದ ಮಿಥಿಲೆ ತುಂಬಿಹೋಗಿತ್ತು.

ವಿಶ್ವಾಮಿತ್ರನು ಉತ್ತಮವಾದ ಸ್ಥಳವನ್ನು ಆರಿಸಿ ಬಿಡಾರ ಮಾಡಿದನು. ಅವರು ಬಂದ ಸುದ್ದಿ ಕೇಳಿ ಜನಕ ಮಹಾರಾಜನು ಕುಲಪುರೋಹಿತ ರಾದ ಶತಾನಂದನ ಜೊತೆಯಲ್ಲಿ ವಿಶ್ವಾಮಿತ್ರನ ಬಿಡಾರಕ್ಕೆ ಬಂದನು. ಅವನಿಗೆ ನಮಸ್ಕರಿಸಿ ಸ್ವಾಗತವನ್ನು ಕೋರಿದನು. ಕುಶಲ ಪ್ರಶ್ನೆಗಳಾದ ನಂತರ ಜನಕನು ರಾಮಲಕ್ಷ್ಮಣರನ್ನು ತೋರಿಸಿ 'ವಿಶ್ವಾಮಿತ್ರರೇ, ಈ ಇಬ್ಬರು ತರುಣರು ಯಾರು? ಇವರನ್ನು ನೋಡಿದರೆ ಅಶ್ವಿನೀ ದೇವತೆಗಳನ್ನು ನೋಡಿದ ಹಾಗೆ ಆಗುತ್ತದೆ. ಇಬ್ಬರೂ ಎತ್ತರ ವಾಗಿ ಬಲವಾದ ಮೈಕಟ್ಟಿನಿಂದ ಕೂಡಿದ್ದಾರೆ. ಅವರ ಕಣ್ಣು ಮತ್ತು ಮುಖ ಲಕ್ಷಣವಾಗಿ ಲವಲ ವಿಕೆಯಿಂದ ಕೂಡಿವೆ. ಹೆಗಲಿನಲ್ಲಿ ಬಿಲ್ಲು ಬಾಣಗ ಳನ್ನು ಹಿಡಿದು ಸಿಂಹದ ಮರಿಗಳಂತೆ ಓಡಾಡು ತ್ತಿರುವ ಈ ಯುವಕರು ಯಾರು?' ಎಂದು ಕೇಳಿದ. ವಿಶ್ವಾಮಿತ್ರನು ರಾಮಲಕ್ಷ್ಮಣರ ವಿಷ ಯವನ್ನು ತಿಳಿಸಿದ. ಹಾಗೆಯೇ ತಾಟಕಿ ಮಾರೀಚ ರನ್ನು ಕೊಂದಿದ್ದನ್ನೂ ಅಹಲ್ಯೆಯ ಶಾಪ ವಿಮೋ ಚನೆಯನ್ನೂ ವಿಸ್ತಾರವಾಗಿ ವಿವರಿಸಿದನು.

ಶತಾನಂದ ಜನಕನ ಕುಲಪುರೋಹಿತ. ಅವನು ಗೌತಮ ಅಹಲ್ಯೆಯರ ಮಗ. ತನ್ನ ತಾಯಿಗೆ ಶಾಪ ವಿಮೋಚನೆಯಾದ ಸಂಗತಿಯನ್ನು ತಿಳಿದು ಅವನಿಗೆ ಬಹಳ ಸಂತೋಷವಾಯಿತು. ರಾಮನಿಗೆ ಅವನು ಭಕ್ತಿಯಿಂದ ನಮಸ್ಕರಿಸಿದ. ರಾಮನಿಂದ ತಾಯಿ ತಂದೆಯರನ್ನು ಒಟ್ಟುಗೂಡಿಸಿದ ವಿಶ್ವಾ ಮಿತ್ರನನ್ನು ಮತ್ತೆ ಮತ್ತೆ ಕೊಂಡಾಡಿದ. ಅವನು ರಾಮನನ್ನು ಕುರಿತು 'ರಾಮ, ನಿನ್ನಿಂದ ನನ್ನ ತಾಯಿಯ ಶಾಪ ಕಳೆಯಿತು. ನಮ್ಮ ತಾಯಿ ತಂದೆಗಳು ಒಟ್ಟುಗೂಡುವಂತಾಯಿತು. ನಿನಗೆ ಪೂಜ್ಯ ವಿಶ್ವಾಮಿತ್ರರಂತಹ ಮಹಾಮುನಿಗಳ ಮಾರ್ಗದರ್ಶನ ಸಿಕ್ಕಿದ್ದು ನಿನ್ನ ಪುಣ್ಯ. ಈ ಋಷಿಯನ್ನು ಸಾಮಾನ್ಯನೆಂದು ತಿಳಿಯಬೇಡ. ಈತನ ಸಾಹಸದಿಂದ ಇಡೀ ಲೋಕವೇ ಬೆರಗು ಗೊಂಡಿದೆ' ಎಂದು ಹೇಳಿ ಕೌಶಿಕರಾಜನು ವಿಶ್ವಾ ಮಿತ್ರನಾದ ಕಥೆಯನ್ನು ವಿವರಿಸಿ ಹೇಳಿದನು.

ರಾಮಲಕ್ಷ್ಮಣರಿಗೆ ವಿಶ್ವಾಮಿತ್ರರು ದೊಡ್ಡ ತಪಸ್ವಿ ಎಂಬ ವಿಚಾರ ತಿಳಿದಿತ್ತು ಅಷ್ಟೆ. ಆದರೆ ಆತ ಇಂತಹ ಮಹಾವ್ಯಕ್ತಿ ಎಂಬ ಸಂಗತಿ ತಿಳಿ ದದ್ದು ಈಗಲೇ; ವಿಶ್ವಾಮಿತ್ರ ತಮ್ಮ ಗುರುವಾಗಿ ದೊರೆತಿದ್ದು ತಮ್ಮ ಭಾಗ್ಯವೆಂದು ತಿಳಿದರು.

ವಿಶ್ವಾಮಿತ್ರನು ಜನಕನನ್ನು ಕುರಿತು 'ಮಹಾ ರಾಜ, ಈ ರಾಜಕುಮಾರರು ನಿನ್ನ ಬಳಿ ಇರುವ ಶಿವಧನುಸ್ಸನ್ನು ನೋಡಲು ಬಂದಿದ್ದಾರೆ. ಅದನ್ನು ಅವರಿಗೆ ತೋರಿಸು. ಆ ಶಿವಧನುಸ್ಸಿನ ಕಥೆ ಯನ್ನು ವಿವರಿಸಿ ಹೇಳು' ಎಂದ. ಜನಕನು 'ರಾಜಕುಮಾರರೇ, ಹಿಂದೆ ಈ ಧನುಸ್ಸು ಶಿವನ ಬಳಿ ಇತ್ತು. ಅವನು ಅದನ್ನು ದೇವತೆಗಳಿಗೆ ಕೊಟ್ಟ. ಆ ದೇವತೆಗಳು ಧನುಸ್ಸನ್ನು ನಮ್ಮ ಪೂರ್ವಜನಾದ ದೇವರಾತ ಎಂಬುವನ ಬಳಿ ಇಟ್ಟರು. ಆಗಿನಿಂದ ಇದು ನಮ್ಮ ವಂಶದಲ್ಲಿಯೇ ಇದೆ'.

'ನನಗೆ ಬಹಳ ಕಾಲ ಮಕ್ಕಳಾಗಿರಲಿಲ್ಲ. ಮಕ್ಕ ಳನ್ನು ಪಡೆಯಲು ಒಂದು ಯಜ್ಞ ಮಾಡಲು ನಿಶ್ಚ ಯಿಸಿದೆ. ಅದಕ್ಕಾಗಿ ಭೂಮಿಯನ್ನು ಉಳುತ್ತಿದ್ದೆ. ನೇಗಿಲಿನಿಂದ ಭೂಮಿಯನ್ನು ಉಳುತ್ತಿದ್ದಾಗ ಒಂದು ಹೆಣ್ಣುಮಗು ಸಿಕ್ಕಿತು. ಸೀತ ಎಂದರೆ



ಯಲ್ಲಿಟ್ಟಿದರು. ಆ ಗಾಡಿಯನ್ನು ತಳ್ಳಿಕೊಂಡು ಬರುವುದಕ್ಕೇ ನೂರಾರು ಜನ ಆಳುಗಳು ಬೇಕಾ ಯಿತು. ಜನಕನು ವಿಶ್ವಾಮಿತ್ರರಿಗೆ ಬಿಲ್ಲನ್ನು ತೋರಿ ಸುತ್ತಾ 'ಮಹರ್ಷಿಗಳೇ, ಈ ಬಿಲ್ಲನ್ನು ಬಗ್ಗಿಸಲು ದೇವತೆಗಳು ರಾಕ್ಷಸರು, ಮಹಾ ಪರಾಕ್ರಮಶಾಲಿ ಗಳಾದ ರಾಜರು ಪ್ರಯತ್ನಿಸಿದರು. ಆದರೆ ಯಾರಿಗೂ ಯಶಸ್ಸು ದೊರೆಯಲಿಲ್ಲ. ಗಂಧರ್ವರು ಕಿನ್ನರರು ಯಕ್ಷರೂ ಸಹ ಸೋತು ಹೋದರು. ಇದು ಅಂತಹ ಮಹಾಧನುಸ್ಸು. ರಾಜಕುಮಾರ

# ಸೀತಾ ಸ್ವಯಂವರ

ನೇಗಿಲಿನ ಗೆರೆ. ಆದ್ದರಿಂದ ಆ ಮಗುವಿಗೆ 'ಸೀತೆ' ಎಂದು ಹೆಸರಿಟ್ಟೆ. ಸೀತೆ ಬೆಳೆದು ದೊಡ್ಡವಳಾಗಿ ದ್ದಾಳೆ. ಮದುವೆಯ ವಯಸ್ಸು ಆಗಿದೆ. ಆಕೆ ಬಹಳ ರೂಪವಂತೆ, ಗುಣವಂತೆ. ದೇವತೆಗಳಂತೆ ಇದ್ದಾಳೆ. ಅಂತಹ ಹುಡುಗಿಯನ್ನು ಮದುವೆಯಾಗುವವನು ಶಕ್ತಿವಂತನಾಗಿರಬೇಕು. ಪರಾಕ್ರಮಿಯಾಗಿರ ಬೇಕು ಎಂದು ನನ್ನ ಇಚ್ಛೆ. ಅದಕ್ಕಾಗಿ ಒಂದು ಸ್ವಯಂವರವನ್ನು ಏರ್ಪಡಿಸಿದೆ. ಸೀತೆಯನ್ನು ಮದುವೆಯಾಗ ಬಯಸುವವರು ಈ ಶಿವಧನುಸ್ಸನ್ನು ಬಗ್ಗಿಸಿ ಹೆದೆಯೇರಿಸಬೇಕು ಎಂದು ಸ್ಪರ್ಧೆ ಇಟ್ಟೆ. ಆದರೆ ಇದುವರೆವಿಗೂ ಒಬ್ಬನಿಗೂ ಆ ಕೆಲಸ ಸಾಧ್ಯವಾಗಿಲ್ಲ. ಎಷ್ಟೋ ಜನ ಪ್ರಯತ್ನಿಸಿದರು. ಆದರೆ ಅವರಿಗೆ ಬಿಲ್ಲನ್ನು ಮೇಲಕ್ಕೆ ಎತ್ತುವು ದಕ್ಕೆ ಸಹ ಸಾಧ್ಯವಾಗಲಿಲ್ಲ. ರಾಮ, ನಿನ್ನನ್ನು ನೋಡಿದರೆ ಪರಾಕ್ರಮಿಯಂತೆ ಕಾಣುತ್ತೀಯೆ. ಆ ಧನಸ್ಸನ್ನು ತರಿಸುತ್ತೇನೆ. ನೀನಾದರೂ ಪ್ರಯತ್ನ ಪಡು. ಶಿವಧನುಸ್ಸಿನ ಹೆದೆಯೇರಿಸಿ ಸೀತೆಯನ್ನು ಮದುವೆಯಾಗು. ನನ್ನ ಮನಸ್ಸಿಗೆ ಹರ್ಷವನ್ನು ಉಂಟುಮಾಡು' ಎಂದ.

ಅಷ್ಟು ಹೊತ್ತಿಗೆ ರಾಜಭಟರು ಶಿವಧನುಸ್ಸನ್ನು ತಂದರು. ಬಿಲ್ಲನ್ನು ಎಂಟು ಚಕ್ರದ ದೊಡ್ಡ ಗಾಡಿ

ರಿಗೆ ಇದನ್ನು ತೋರಿಸಿ' ಎಂದ. ವಿಶ್ವಾಮಿತ್ರನು ರಾಮನ ಕಡೆಗೆ ತಿರುಗಿ 'ಮಗೂ, ಧನಸ್ಸನ್ನು ನೋಡು' ಎಂದು ಹೇಳಿದ. ರಾಮನು ಪೆಟ್ಟಿಗೆಯ ಮುಚ್ಚಳವನ್ನು ತೆಗೆದು ಆ ಮಹಾ ಧನುಸ್ಸನ್ನು ನೋಡಿದ. ಅದನ್ನು ಎತ್ತಿ ಹೆದೆಯೇರಿಸಬೇಕೆಂದು ಆಸೆ ಆಯಿತು. ತನ್ನ ಆಸೆಯನ್ನು ವಿಶ್ವಾಮಿತ್ರನಿಗೆ ತಿಳಿಸಿದ. ವಿಶ್ವಾಮಿತ್ರನು 'ಆಗಬಹುದು' ಎಂದ. ರಾಮ ಮತ್ತೆ ಬಿಲ್ಲಿನ ಬಳಿಗೆ ಹೋದ. ದೇವತೆ ಗಳೂ, ದೈತ್ಯರೂ ಎತ್ತಲಾರದ ಆ ಮಹಾ ಧನುಸ್ಸನ್ನು ಸುಲಭವಾಗಿ ಮೇಲೆತ್ತಿದ. ಇದನ್ನು ನೋಡುತ್ತಿದ್ದವರೆಲ್ಲ ಆಶ್ಚರ್ಯದಿಂದ ಮೂಕರಾ ದರು. ದೇವತೆಗಳು ಆಕಾಶದಲ್ಲಿ ನೆರೆದರು. ರಾಮನು ಧನಸ್ಸನ್ನು ಮೇಲೆತ್ತಿದವನೇ ಹೆದೆ ಯೇರಿಸಲು ಬಗ್ಗಿಸಿದನು; ಅಷ್ಟೇ. ಅವನ ಬಲ ತಾಳಲಾರದೆ ಧನಸ್ಸು ಸಿಡಿಲಿನಂತೆ ಸದ್ದು ಮಾಡುತ್ತ ಮುರಿದು ಹೋಯಿತು. ಆ ಸದ್ದಿನಿಂದ ಎಲ್ಲರೂ ಮೂರ್ಛೆಹೋದರು. ಅಸಾಧಾರಣ

" ಎಳೆಯರ ರಾಮಾಯಣ "ದಿಂದ

- ಶ್ರೀ ಮೈ. ನ. ನಾಗರಾಜ

ವಾದ ಕೆಲಸವನ್ನು ರಾಮ ಒಂದು ಘಳಿಗೆಯಲ್ಲಿ ಮುಗಿಸಿದ್ದ. ಜನರೆಲ್ಲ ಕಿವಿಗಡಚಿಕ್ಕುವಂತೆ ಚಪ್ಪಾಳೆಯ ಮಳೆಗರೆದರು. ಉತ್ಸಾಹ ಆನಂದಗಳಿಂದ ಕುಪ್ಪಳಿಸಿದರು.

ಜನಕ ಮಹಾರಾಜನ ಆನಂದಕ್ಕಂತೂ ಪಾರವೇ ಇಲ್ಲ. ರಾಮನು ಅವನ ಕಲ್ಪನೆಗೂ ಮೀರಿ ಶಕ್ತಿವಂತನಾಗಿದ್ದ. ಇನ್ನೇನು ಬೇಕು? ತನ್ನ ಮಗಳು ಸೀತಾದೇವಿಯನ್ನು ಮದುವೆಯಾಗಬೇಕೆಂದು ರಾಮನನ್ನು ಪ್ರಾರ್ಥಿಸಿದ. ತನ್ನ ಇನ್ನೊಬ್ಬ ಮಗಳು ಊರ್ಮಿಳೆಯನ್ನು ಮದುವೆಯಾಗಬೇಕೆಂದು ಲಕ್ಷ್ಮಣನನ್ನು ಪ್ರಾರ್ಥಿಸಿಕೊಂಡ. ತನ್ನ ಮಂತ್ರಿಗಳನ್ನು ಅಯೋಧ್ಯೆಗೆ ಕಳುಹಿಸಿದ, 'ದಶರಥ ಮಹಾರಾಜನಿಗೆ ಎಲ್ಲ ವಿಷಯಗಳನ್ನೂ ತಿಳಿಸಿ ಎಲ್ಲರನ್ನೂ ಕರೆದುಕೊಂಡು ಬನ್ನಿ' ಎಂದು ಹೇಳಿ ಕಳುಹಿಸಿದ. ವಿಶ್ವಾಮಿತ್ರರನ್ನು 'ನೀವು ಇಲ್ಲಿಯೇ ಇದ್ದು ಮದುವೆಯನ್ನು ನಡೆಸಿಕೊಡಬೇಕೆ'ಂದು ಕೇಳಿಕೊಂಡ. 'ಅಪೂರ್ವವಾದ ರೀತಿಯಲ್ಲಿ ರಾಮ ಸೀತೆಯರ ಮದುವೆಯನ್ನು ನಡೆಯಿಸಲು ಸಿದ್ಧತೆಗಳನ್ನು ಮಾಡಿ' ಎಂದು ತನ್ನ ಮಂತ್ರಿಗಳಿಗೆ ಆಜ್ಞಾಪಿಸಿದ.

ಸುದ್ದಿ ದಶರಥ ಮಹಾರಾಜನಿಗೆ ತಲುಪಿತು. ತನ್ನ ಮಗನ ಸಾಹಸಗಳನ್ನು ಕೇಳಿ ದಶರಥನಿಗೆ ಆನಂದದ ಉದ್ರೇಕವಾಯಿತು. ಜನಕ ಮಹಾರಾಜನ ಸಂಬಂಧ ದೊರಕಿದ್ದು ತನ್ನ ಭಾಗ್ಯ ಎಂದುಕೊಂಡ, ತನ್ನ ಸಂಪೂರ್ಣ ಪರಿವಾರದೊಂದಿಗೆ ಮಿಥಿಲಾಪುರದ ಕಡೆ ಪ್ರಯಾಣ ಬೆಳೆಸಿದ.

ಮಿಥಿಲೆಯಲ್ಲಿ ಅವರಿಗೆಲ್ಲ ಭವ್ಯವಾದ ಸ್ವಾಗತ ದೊರಕಿತು; ದಶರಥನ ಕುಲ ಪುರೋಹಿತರಾದ ವಸಿಷ್ಠರೂ, ಜನಕನ ಕುಲಪುರೋಹಿತರಾದ ಶತಾನಂದನೂ ಒಟ್ಟಿಗೆ ಕುಳಿತರು. ರಾಮ ಸೀತೆಯರ ಲಗ್ನಕ್ಕೆ ಒಳ್ಳೆಯ ದಿನವನ್ನು ನಿಶ್ಚಯಿಸಿದರು. ಜನಕನು ತನ್ನ ತಮ್ಮ ಕುಶಧ್ವಜನನ್ನು ಕರೆಸಿಕೊಂಡ. ಕುಶಧ್ವಜ ಸಾಂಕಾಶನಗರದಲ್ಲಿದ್ದ. ಅವನಿಗೆ ಇಬ್ಬರು ಹೆಣ್ಣು ಮಕ್ಕಳು. ಮೊದಲನೆಯವಳು ಮಾಂಡವಿ, ಎರಡನೆಯವಳು ಶ್ರುತಕೀರ್ತಿ. ಇಬ್ಬರೂ ರೂಪವತಿಯರು ; ಗುಣಸಂಪನ್ನೆಯರು. 'ಅವರನ್ನು ಭರತ, ಶತ್ರುಘ್ನರಿಗೆ ಕೊಟ್ಟು ಮದುವೆ ಮಾಡಿ' ಎಂದ ವಿಶ್ವಾಮಿತ್ರ. ಕುಶಧ್ವಜ ಸಂತೋಷದಿಂದ ಒಪ್ಪಿಕೊಂಡ.

ವಿವಾಹ ಸಿದ್ಧತೆಗಳು ಭರದಿಂದ ಸಾಗಿದವು. ಇಡೀ ಊರೇ ಉತ್ಸಾಹದಿಂದ ಕಂಗೊಳಿಸಲಾರಂಭಿಸಿತು. ಮಿಥಿಲೆಯಲ್ಲಿ ಎಲ್ಲಿ ನೋಡಿದರೂ ಹಬ್ಬದ ಸಂಭ್ರಮ. ರಸ್ತೆಗಳಲ್ಲಿ ಚಪ್ಪರಗಳನ್ನೂ ತೋರಣಗಳನ್ನು ಕಟ್ಟಿದ್ದರು. ಎಲ್ಲ ಕಡೆಯೂ ರಂಗೋಲಿಗಳನ್ನು ಇಟ್ಟಿದ್ದರು. ಮಂಗಳವಾದ್ಯಗಳು ಮೊಳಗಿ ಮನಸ್ಸಿಗೆ ಹರ್ಷವನ್ನುಂಟು ಮಾಡುತ್ತಿದ್ದವು.

ದೊಡ್ಡದಾದ ಯಜ್ಞ ಶಾಲೆಯಲ್ಲಿ ಮದುವೆ. ಎಷ್ಟು ಸಾವಿರ ಜನರು ಬಂದರೂ ಕುಳಿತುಕೊಳ್ಳುವಷ್ಟು ವಿಶಾಲವಾಗಿತ್ತು ಅದು. ಮದುವೆಯ ಮಂಟಪ ಎತ್ತರವಾದ ಸ್ಥಳದಲ್ಲಿ ಇತ್ತು. ಇಂದ್ರನ ಒಡ್ಡೋಲಗದಂತೆ ಇತ್ತು.

ಮದುವೆಯ ದಿನ ಬೆಳಗಾಯಿತು. ಎಲ್ಲರೂ ಬಹಳ ಬೇಗನೆ ಎದ್ದರು. ಬೆಳಗಿನ ಕಾರ್ಯಗಳನ್ನು ಪೂರೈಸಿದರು. ದಶರಥ ಮಹಾರಾಜನು ಹೆಂಡತಿಯರನ್ನೂ ಮಕ್ಕಳನ್ನೂ ಕರೆದುಕೊಂಡು ಪುರೋಹಿತರ ಹಿಂದೆ ಯಜ್ಞಶಾಲೆಗೆ ಬಂದನು. ರಾಮನೂ ಅವನ ತಮ್ಮಂದಿರೂ ಮಂಗಳ ಕಂಕಣಗಳನ್ನು ಧರಿಸಿದ್ದರು. ಅತ್ಯುತ್ತಮವಾದ ಆಭರಣಗಳನ್ನೂ ವಸ್ತ್ರಗಳನ್ನೂ ಧರಿಸಿದ್ದರು. ದೇವತೆಗಳಂತೆ ಶೋಭಿಸುತ್ತಿದ್ದರು. ಕಿಕ್ಕಿರಿದು ಸೇರಿದ್ದ ಜನ ಮೈಮರೆತು ರಾಮನನ್ನು ನೋಡಿದರು. ಅವನ ಸುಂದರವಾದ ಮುಖ, ಬಲವಾದ ಮೈಕಟ್ಟು, ಮೋಹಕವಾದ ಮುಗುಳ್ನಗೆ, ಮುಖದಲ್ಲಿದ್ದ ವಿನಯಭಾವದಿಂದ ಜನ ಮುಗ್ಧರಾದರು.

ಯಜ್ಞಶಾಲೆಯಲ್ಲಿ ದೊಡ್ಡದಾದ ವೇದಿಕೆ. ಅಲ್ಲಿ ಜನಕನ ಮಕ್ಕಳು ಸೀತೆ, ಊರ್ಮಿಳೆಯರು ಮಂಗಳ ವಸ್ತ್ರಗಳನ್ನು ಧರಿಸಿ ಶೋಭಾಯಮಾನವಾಗಿದ್ದಾರೆ. ಪಕ್ಕದಲ್ಲೇ ಕುಶಧ್ವಜನ ಮಕ್ಕಳು ಮಾಂಡವಿ, ಶ್ರುತಕೀರ್ತಿಯರು. ಅವರು ಮಂಗಳ ವಸ್ತ್ರಗಳನ್ನು ಉಟ್ಟಿದ್ದಾರೆ.

ರಾಮ, ಲಕ್ಷ್ಮಣ, ಭರತ ಮತ್ತು ಶತ್ರುಘ್ನರು ವೇದಿಕೆಯ ಬಳಿಗೆ ಬಂದರು. ಜನಕನು ವಸಿಷ್ಠರನ್ನು ಕುರಿತು 'ಋಷಿಗಳೇ ವಿವಾಹವನ್ನು ನೆರವೇರಿಸಿ ಕೊಡಿ' ಎಂದು ಪ್ರಾರ್ಥಿಸಿದ. ವಸಿಷ್ಠರು, ವಿಶ್ವಾಮಿತ್ರ ಹಾಗೂ ಶತಾನಂದರನ್ನು ಕೂಡಿ ವಿವಾಹ ಮಂಟಪವನ್ನು ರಚಿಸಿದರು. ಶಾಸ್ತ್ರೋಕ್ತವಾಗಿ ಹೋಮಕುಂಡವನ್ನು ನಿರ್ಮಿಸಿದರು. ಅದನ್ನು ಹೂಗಳಿಂದ ಅಲಂಕರಿಸಿದರು. ಕಲಶಗಳು, ಶಂಖಗಳು, ಗಂಧ ಅಕ್ಷತೆಗಳು ಮುಂತಾದ ಮಂಗಳ ದ್ರವ್ಯಗಳನ್ನು ವೇದಿಕೆಯ ಮೇಲಿಟ್ಟರು ; ವೇದಗಳನ್ನು ಪಠಿಸುತ್ತಾ ಹೋಮಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿದರು. ಹೋಮ ಮಾಡಿದರು.

ಜನಕನು ಸರ್ವ ಆಭರಣಗಳನ್ನು ಧರಿಸಿ ದೇವತೆಯಂತೆ ಕಂಗೊಳಿಸುತ್ತಿದ್ದ ಸೀತಾದೇವಿಯನ್ನು ಶ್ರೀರಾಮನ ಎದುರಿಗೆ ನಿಲ್ಲಿಸಿದನು. ಶ್ರೀರಾಮನನ್ನು ಕುರಿತು 'ನನ್ನ ಮಗಳಾದ ಸೀತೆಯು ಇಂದಿನಿಂದ ನಿನ್ನ ಪತ್ನಿ. ನಿನಗೆ ಧರ್ಮದ ಆಚರಣೆಯಲ್ಲಿ ಸಹಾಯಕಳಾಗಿರುತ್ತಾಳೆ. ಇವಳನ್ನು ಸ್ವೀಕರಿಸು. ನಿನಗೆ ಮಂಗಳವಾಗಲಿ' ಎಂದು ಶ್ರೀ ರಾಮನ ಕೈಯಲ್ಲಿ ಮಂತ್ರದ ನೀರನ್ನು ಹಾಧಾರೆಯೆರೆದ. ಇದನ್ನು ಮೇಲಿನಿಂದ ನೋಡುತ್ತಿದ್ದ ದೇವತೆಗಳು 'ಭಲೆ, ಭಲೆ' ಎಂದು ಹರ್ಷದ ಉದ್ಗಾರ ಮಾಡಿದರು. ದೇವದುಂದುಭಿಗಳು ಮೊಳಗಿದವು. ಪುಷ್ಪವೃಷ್ಟಿಯಾಯಿತು. ಎಲ್ಲರೂ ಆನಂದದಲ್ಲಿ ಮುಳುಗಿದರು.

ನಂತರ ಜನಕನು ಲಕ್ಷ್ಮಣನಿಗೆ ಊರ್ಮಿಳೆಯನ್ನು ಪಾಣಿಗ್ರಹಣ ಮಾಡಿಸಿದ. ಹಾಗೆಯೇ ಭರತನಿಗೆ ಮಾಂಡವಿಯನ್ನೂ ಶತ್ರುಘ್ನನಿಗೆ ಶ್ರುತಕೀರ್ತಿಯನ್ನೂ ಪಾಣಿಗ್ರಹಣ ಮಾಡಿಸಿದನು.

ರಾಜಕುಮಾರರು ತಮ್ಮ ತಮ್ಮ ಪತ್ನಿಯರ ಕೈಗಳನ್ನು ಹಿಡಿದು ಕೊಂಡು ಅಗ್ನಿಯ ಸುತ್ತಲೂ ಪ್ರದಕ್ಷಿಣೆ ಹಾಕಿದರು. ಋಷಿಮುನಿಗಳಿಗೆ ನಮಸ್ಕಾರ ಮಾಡಿದರು. ಹಿರಿಯರಿಗೂ, ತಂದೆ ತಾಯಿಗಳಿಗೂ ಅಭಿವಾದನೆ ಮಾಡಿದರು. ಆಗ ಮತ್ತೊಮ್ಮೆ ದೇವದುಂದುಭಿಗಳು ಮೊಳಗಿದವು. ಅಪ್ಸರೆಯರು ನಾಟ್ಯವಾಡಿದರು. ಗಂಧರ್ವರು ಇಂಪಾಗಿ ಹಾಡಿದರು. ಮಿಥಿಲಾಪುರದ ಜನ ಹರ್ಷದಲ್ಲಿ ಮೈಮರೆತರು.

ವಿವಾಹ ಮುಗಿಯಿತು. ರಾಮ, ಲಕ್ಷ್ಮಣ, ಭರತ ಶತ್ರುಘ್ನರು ಗೃಹಸ್ಥರಾದರು. ಎಲ್ಲರೂ ಅರಮನೆಗೆ ಹಿಂತಿರುಗಿದರು.

ಮದುವೆಯಾದ ಮಾರನೆಯ ದಿನ ವಿಶ್ವಾಮಿತ್ರ ರಾಮನನ್ನು ಕುರಿತು 'ಮಗೂ ರಾಮ, ಕೆಲಸ ಪೂರೈಸಿತು. ನಾನು ತಪಸ್ಸಿಗಾಗಿ ಹಿಮಾಲಯಕ್ಕೆ ಹೋಗುತ್ತೇನೆ. ನಿನಗೆ ಮಂಗಳವಾಗಲಿ' ಎಂದನು. ಎಲ್ಲರೂ ಅವನನ್ನು ಮಿಥಿಲೆಯ ಅಂಚಿನವರೆಗೆ ಹಿಂಬಾಲಿಸಿ ಬೀಳ್ಕೊಟ್ಟರು.

ದಶರಥ ಮಹಾರಾಜನು ಅಯೋಧ್ಯೆಗೆ ಹಿಂದಿರುಗಲು ಸಿದ್ಧನಾದ. ಜನಕನ ಅಪ್ಪಣೆ ಪಡೆದು ಹೆಂಡತಿಯರನ್ನು, ಮಕ್ಕಳು ಸೊಸೆಯರನ್ನೂ ಕರೆದುಕೊಂಡು ಅಯೋಧ್ಯೆಗೆ ಹೊರಟ. ★

# ಭರತ ಭಕ್ತಿ

ಶ್ರೀ ಮ. ದ್ರಾ ಮಾ ಯ ಣ ದ ಲ್ಲಿ ಮೂರು ಜೊತೆ ಸೋದರರನ್ನು ಕಾಣುತ್ತೇವೆ. ೧ ರಾಮ – ಭರತ ೨. ವಾಲಿ – ಸುಗ್ರೀವ ಮತ್ತು ೩. ರಾವಣ – ವಿಭೀಷಣ. ಶ್ರೀರಾಮ – ಭರತರು ಶ್ರೀಮನ್ನಾರಾಯಣನ ಅಂಶವಾಗಿ ಹುಟ್ಟಿದವರು ; ವಾಲಿ – ಸುಗ್ರೀವರು ದೇವತೆಗಳ ಅಂಶದಿಂದ ಹುಟ್ಟಿದವರು . ರಾವಣ – ವಿಭೀಷಣರು ಬ್ರಹ್ಮನ ಪ್ರಪೌತ್ರರಾಗಿ ಹುಟ್ಟಿ ರಾಕ್ಷಸ ಕುಲ ದೀಪಕರಾಗಿದ್ದರು. ಪರಬ್ರಹ್ಮ ವಸ್ತುವಿಗೂ ಇತರ ಜೀವವರ್ಗಕ್ಕೂ ಇರುವ ವ್ಯತ್ಯಾಸ ಈ ಭ್ರಾತೃಗಳ ಅಧ್ಯಯನದಿಂದ ಮನದಟ್ಟಾಗುತ್ತದೆ. ವಾಲಿ – ಸುಗ್ರೀವರು ದೇವತೆಗಳ ಅಂ ಶ ಸಂ ಭೂ ತ ರಾ ದ ರೂ ಈರ್ಷ್ಯಾಸೂಯೆಗಳಿಗೊಳಗಾಗಿ ಇನ್ನೊಬ್ಬರ ನಾಶದಲ್ಲಿ ಸ್ವಂತ ಏಳಿಗೆಯನ್ನು ಕಂಡುಕೊಂಡವರು. ರಾವಣ – ವಿಭೀಷಣರೂ ಬ್ರಹ್ಮಜ್ಞಾನಿಗಳಾಗಿದ್ದರೂ ರಾಜಸ ತಾಮಸ ಗುಣಗಳಿಂದ ಪ್ರೇರಿತರಾದವರು. ರಾವಣನು ಈ ಗುಣಗಳ ಪ್ರಭಾವಕ್ಕೆ ಪೂರ್ಣ ಒಳಗಾಗಿ ಶಿವ ಪಾರ್ವತಿ ನಂದಿಗಳಿಗೆ ಅಪಚಾರವೆಸಗಿದವನು, ಶ್ರೀ ಮಹಾಲಕ್ಷ್ಮಿಯ ಅವತಾರವಾದ ಸೀತಾದೇವಿಗೆ ಉಪಹತಿ ತಂದವನು. ವಿ ಭೀ ಷ ಣ ನು ರಾಜಸ ತಾಮಸ ಗುಣಗಳನ್ನು ಬಿಟ್ಟು ಸಾತ್ತ್ವಿಕತೆಯನ್ನು ಮೈಗೂಡಿಸಿಕೊಂಡರೇನೇ ಜೀವಿಯು ಭಗವದನುಗ್ರಹಕ್ಕೊಳಗಾಗಬಹುದೆಂದು ತನ್ನ ಆಚಾರ ವಿಚಾರ ವ್ಯವಹಾರಗಳಿಂದ ಪ್ರಪಂಚಕ್ಕೆ ನಿದರ್ಶನವನ್ನೊದಗಿಸಿದವನು. ಶ್ರೀರಾಮ – ಭರತರಾದರೋ ಕೇವಲ ಸಾತ್ತ್ವಿಕ ಸಂಪನ್ನರಾಗಿ ಭಗವಂತನ ಭಾಗವತರ ಕೈಂಕರ್ಯಕ್ಕಾಗಿ ತಮ್ಮನ್ನು ತಾವೇ ನಿಸ್ಪೃಹತೆಯಿಂದ ಪರಸ್ಪರ ಒಪ್ಪಿಸಿಕೊಂಡವರು ; ಅಹಿಂಸಾ, ಅಸ್ತೇಯ, ಆರ್ಜವ ಇತ್ಯಾದಿ ಗುಣಗಳ ಸಾಕಾರಭೂತರಾದವರು ; ತಮ್ಮ ನಡೆನುಡಿ ವಿಚಾರಗಳಿಂದ ಮನುಕುಲಕ್ಕೇ ಆದರ್ಶಭೂತರಾದರು.

ಶ್ರೀ ರಾ ಮ ನು ಹೆಚ್ಚೋ ಭರತನು ಹೆಚ್ಚೋ ಎಂದು ಯಾರಾದರೂ ಪ್ರಶ್ನಿಸಿದರೆ ಉತ್ತರಿಸುವುದು ಕಷ್ಟ. ಶ್ರೀರಾಮನು ಹೆಚ್ಚೆಂದು ಹೇಳೋಣವೇ ? ಹಾಗೆ ಹೇಳಿದರೆ ಲೋಕದಲ್ಲಿ ಅಪಹಾಸ್ಯಕ್ಕೆ ಈಡಾಗುತ್ತೇವೆ. ಒಂದು ಜೆಲ್ಲದ ಮುದ್ದೆಯನ್ನು ಮುರಿದು ದೊಡ್ಡ ಚೂರಿನಲ್ಲಿ ಸಿಹಿಹೆಚ್ಚು, ಚಿಕ್ಕ ಚೂರಿನಲ್ಲಿ ಸಿಹಿ ಕಡಿಮೆಯೆಂದರೆ ಸರಿಯೇ ? ದೊಡ್ಡ ಬೆಂಕಿಯ ಕೆಂಡವನ್ನು ಚೂರಾಗಿಸಿ ದೊಡ್ಡ ಚೂರಿನಲ್ಲಿ ಹೆಚ್ಚು ಬಿಸಿ, ಚಿಕ್ಕ ಚೂರಿನಲ್ಲಿ ಕಡಿಮೆ ಬಿಸಿ ಎಂದು ಕೈಯಿಂದ ಮುಟ್ಟಿದರೆ ಹೇಗೆ ? ಇದಕ್ಕಾಗಿಯೇ ಸಾಲಿಗ್ರಾಮದ ಆಕಾರ ಪರಿಮಾಣದಿಂದ ಅದಕ್ಕೆ ಮಹತ್ವವಿಲ್ಲ, ಎಲ್ಲಾ ಒಂದೇ. ಆದ್ದರಿಂದ ಶ್ರೀರಾಮ - ಭರತರು ಪರಸ್ಪರ ತಮ ತಮಗೇ ಈಡು, ಹೆಚ್ಚು ಕಡಿಮೆ ಮಾತೇ ಇಲ್ಲ. ಇದಕ್ಕಾಗಿಯೇ ಹೇಳುವುದು ಪರಮ ವೈಕುಂಠದಲ್ಲಿ ಭಗವಂತನಿಗೂ ನಿತ್ಯರಿಗೂ ಮುಕ್ತರಿಗೂ ಪರಮ - ಸಾಮ್ಯವಿದೆಯೆಂದು. ಮರ್ತ್ಯಲೋಕದಲ್ಲಿರುವಂತೆ ತಾರತಮ್ಯಗಳಿಲ್ಲ, ಹೆಚ್ಚು ಕಡಿಮೆ ದರ್ಜೆಗಳೂ ಯಾವುವೂ ಇಲ್ಲದ ನಿತ್ಯಸಾಮ್ಯ ನಮ್ಮ ಸ್ವಾಮಿ ಶ್ರೀಮನ್ನಾರಾಯಣನ ಸನ್ನಿಧಿಯಲ್ಲಿ ಪರಮ ಪದದಲ್ಲಿದೆಯೆಂದು ಶ್ರೀವೈಷ್ಣವ ಆಳ್ವಾರಾಚಾರ್ಯರುಗಳು ಘೋಷಿಸಿದ್ದಾರೆ.

ಶ್ರೀಮದ್ರಾಮಾಯಣವು ಪ್ರಪತ್ತಿ ಶಾಸ್ತ್ರ. ಪ್ರಪತ್ತಿ ಶಾಸ್ತ್ರವು ಯಾವ ವಿಚಾರಗಳನ್ನು ವಿವರಿಸಿ ತಿಳಿಸಿದಯೋ ಆ ವಿಚಾರಗಳನ್ನು ಶ್ರೀರಾಮ - ಭರತರಿಂದ ಅವಧಾರಣ ಮಾಡಬಹುದು, ಮೊದಲನೆಯ ಅಂಶ ಶೇಷ - ಶೇಷೀಭಾವ. ಶ್ರೀರಾಮಚಂದ್ರ ಶೇಷಿ, ಭರತ ಶೇಷ. ಜೀವಿಯನ್ನು ಉದ್ಧರಿಸುವುದನ್ನೇ ಭಗವಂತನು ತನ್ನ ವ್ರತವಾಗಿ ಇಟ್ಟುಕೊಂಡಿರುವನು. ಇದೇ ಅವನ ಧರ್ಮ. ಈ ಧರ್ಮ ಸಂತ್ರಾಣವೇ ಅವನ ಕರ್ಮ. ಶ್ರೀರಾಮನ ನಡವಳಿಕೆ ಪೂರ್ತಾ ಇದನ್ನೇ ತೋರಿಸತಕ್ಕದ್ದಾಗಿದೆ. ಉದ್ಬುದ್ಧನಾದ ಜೀವಿಯು ತಾನು ಭಗವಂತನ ಕೈಂಕರ್ಯದಲ್ಲಿಯೇ ರತ, ತಾನು ತನ್ನದು ಎನ್ನುವುದು ಯಾವುದೂ ಇಲ್ಲದೆ ಎಲ್ಲವೂ ಅವನ ಸಂಕಲ್ಪ. ಎಲ್ಲವೂ ಅವನ ಇಚ್ಛೆ ಎಂಬ ಭಾವನಾ ವಿಶೇಷದಿಂದ, ಮಹಾ ವಿಶ್ವಾಸದಿಂದ, ಆತ್ಮ ಕಾರ್ಪಣ್ಯದಿಂದ, ಹರಿ ಹರಿದಾಸರ ಆವ ಕೃಪೆಗೆ ಪಾತ್ರನಾಗದಂತೆ ನಡೆನುಡಿಗಳಲ್ಲಿ ಶುದ್ಧನಾಗಿರಲು ಜಾಗೃತನಾಗಿರತಕ್ಕವನು. ಈ ಅಂಶವನ್ನು ವಿಪುಲವಾಗಿ ತೋರಿಸಿಕೊಟ್ಟಿರುವವನು ರಘುವಂಶ ತಿಲಕನಾದ ಭರತ.

ಭರತ ಎಂಬ ಪದವೇ ಮೇಲಿನ ಅರ್ಥಗಳನ್ನೆಲ್ಲಾ ಒಳಗೊಂಡು ರಮ್ಯವಾಗಿದೆ. ಈ ಮೂರು ಅಕ್ಷರಗಳು ಮೂರು ಪದಗಳಾಗಿ ವಿಭಾಗಯೋಗ್ಯವಾಗಿದೆ. ಭ, ಭರ, ರತ – ಎಂಬ ಪದಗಳ ಸರಣಿ ತತ್ತ್ವಹಿತ ಪುರುಷಾರ್ಥಗಳನ್ನೊಳಗೊಂಡಿವೆ. ಭಗವಂತನಲ್ಲಿ ಭರಸಮರ್ಪಣ ಮಾಡಲು ರತನಾಗಿರುವನು ಭರತ. ಈ ಅರ್ಥ ಸಾರಸ್ಯವು ಅವನ ಚರಿತ್ರೆಯಿಂದ ತಿಳಿದು ಬರತಕ್ಕ ಮುಖ್ಯ ವಿಷಯವಾಗಿದೆ.

ಶ್ರೀರಾಮ – ಭರತರಿಗೆ ವಿಷಮ ಸನ್ನಿವೇಶಗಳು ಯಾವಾಗಲೂ ಒದಗಿಬಂದಿಲ್ಲ. ಪರಸ್ಪರ ಭಾವನೆಗಳೂ ಪ್ರೀತಿ ಸಂಯುಕ್ತವಾಗಿ ಗೌರವವಾಗಿ ಕಾಯಾ ವಾಚಾ ಮನಸಾ ಭಾವಿಸಿ ಬೆಳೆದ ಸೋದರರು. ತಾಯಿಯರು ಬೇರೆ ಇರಬಹುದು, ಅವರು ಪ್ರಾಕೃತರೇ ಆಗಿರಬಹುದು. ಆದರೆ ಈ ಇಬ್ಬರು ವ್ಯಕ್ತಿಗಳೂ ಮೊದಲಿನಿಂದ ಕೊನೆಯವರಿಗೂ ಅಲೌಕಿಕವಾದ ಚರ್ಯೆಯುಳ್ಳವರಾಗಿಯೇ ಇದ್ದವರು. ಪಟ್ಟಮಹಿಷಿಯಾದ ಕೌಸಲ್ಯೆಗೆ ಸರ್ವ ಜ್ಯೇಷ್ಠನಾಗಿ ಹುಟ್ಟಿದವನು ಶ್ರೀರಾಮ ; ಮುದ್ದಿನ ಮಡದಿಯಾದ ಕೈಕೇಯಿಗೆ ಹುಟ್ಟಿದವನು ಭರತ. ಇಷ್ಟಾದರೂ ಅವರಿಗೆ ರಾಜ್ಯಕ್ಕಾಗಿ ಸ್ಪರ್ಧೆಯಿಲ್ಲ.

ಶ್ರೀ ಎಸ್. ನರಸಿಂಹಾಚಾರ್ಯ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸ ಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
**ತಿ. ತಿ. ದೇವಸ್ಥಾನ, ತಿರುಪತಿ-517507**
**ಚಿತ್ತೂರು ಜಿಲ್ಲೆ, ಆಂ. ಪ್ರ.**

ಶ್ರೀರಾಮನ ಪಟ್ಟಾಭಿಷೇಕ ತೀರ್ಮಾನವಾದಾಗ ಸ್ತ್ರೀಸಹಜ ಸ್ವಾರ್ಥದಿಂದ, ದುಷ್ಟಳಾದ ಮಂಥರೆಯಿಂದ ಪ್ರೇರೇಪಿಸಲ್ಪಟ್ಟಾಗ, ಕೈಕೇಯಿಯು ರಾಮನ ವನವಾಸವನ್ನೂ ಭರತನ ಪಟ್ಟಾಭಿಷೇಕವನ್ನೂ ನೆನೆದಳು. ಪತಿಯಾದ ದಶರಥ ಮಹಾರಾಜನನ್ನು ಇಕ್ಕಟ್ಟಿಗೆ ಸಿಲುಕಿಸಿದಳು, ಧರ್ಮ ಸಂಕಟದಲ್ಲಿ ತೊಳಲಾಡುವಂತೆ ಮಾಡಿದಳು. ಶ್ರೀರಾಮನು ಅಲೆಯೇಳದ ಮಡುವಿನಂತೆ ನಿರ್ವಿಕಾರನಾಗಿದ್ದು ತನ್ನ ಸೋದರ ಪ್ರೇಮ ಸೂಚಕವಾಗಿ ಭರತನಿಗೆ ತಾನೇ ಪಟ್ಟಾಭಿಷೇಕಮಾಡಿ ವನಚರನಾಗುವುದಾಗಿ ಹೇಳುತ್ತಾನೆ. ಆದರೆ ಪಿತೃವಿಯೋಗವಾಗಿ, ಭರತನಿಗೆ ರಾಜ್ಯವೆಂಬ ತೀರ್ಮಾನವಾಗಿ, ಇದ್ಯಾವುದರ ಅರಿವೂ ಇಲ್ಲದೆ ರಾಜಧಾನಿಗೆ ಬಂದ ಭರತನಿಗೆ ಸಿಡಿಲು ಬಡಿದಂತಾಯಿತು. ಶ್ರೀರಾಮು ಕಾಡಿಗೆ ಹೋಗುವುದು, ತಾನು ರಾಜನಾಗುವುದು, ಹೆಂಗಸಿನ ಅಧರ್ಮದ ಕುತಂತ್ರಕ್ಕೆ ಪ್ರಪಂಚ ಸಿಕ್ಕುವುದು – ಇವು ಯಾವುವೂ ಭರತನಿಗೆ ಸರಿಬೀಳಲಿಲ್ಲ. ಪ್ರತಿಯಾಗಿ ತಾನು ವನವಾಸ ಮಾಡಲೂ, ಶ್ರೀರಾಮನಿಗೆ ರಾಜ್ಯವನ್ನು ಸಮರ್ಪಿಸಲೂ ದೃಢಸಂಕಲ್ಪ ಮಾಡಿದನು. ತಾಯಿಯಿಂದ ಎಂಥಾ ಅಪಕೀರ್ತಿ ಬಂತು, ತನ್ನ ಕೈಂಕರ್ಯ ಸಂಪತ್ತಿಗೆ ಎಂಥಾ ಆಘಾತವಾಯಿತು ಎಂಬುದನ್ನು ನೆನೆನೆನೆದು ಗೋಳಿಡುತ್ತಾ ತನ್ನನ್ನು ಅಪೇಕ್ಷಿಸಿದ ಕೌಸಲ್ಯೆಗೂ, ರಾಜನಾಗಲು ಪ್ರೇರಿಸಿದ ಪುರೋಹಿತ ವಸಿಷ್ಠರಿಗೂ, ತನ್ನನ್ನು ಗುಮಾನಿಯಿಂದ ಆದರಿಸಿದ ಗುಹನಿಗೂ, ಪೂರ್ಣ ಪ್ರಜ್ಞರಾದ ಭವಿಷ್ಯತ್ ವಿಜ್ಞಾನಿಗಳಾದ ಭರದ್ವಾಜರಿಗೂ ತನ್ನ ಅಳಲನ್ನು ಮನವೊಗಿಸಿ ಎಲ್ಲರೂ ಶ್ರೀರಾಮನ ರಾಜ್ಯಕ್ಕೆ ಪ್ರೇರಕರಾಗುವಂತೆ ಅವರೆಲ್ಲರ ಮನಸ್ಸನ್ನೂ ಗೆದ್ದುಕೊಂಡ. ಶತ್ರುಘ್ನನು ಮಂಥರೆಯನ್ನು ದಂಡಿಸಲು 'ಅದು ಅಕಾರ್ಯ, ಆ ಕೆಲಸ ಶ್ರೀರಾಮನ ಪ್ರೀತಿಗೆ ಕುತ್ತು' ಎಂಬಂಶವನ್ನು ಒತ್ತಿ ಹೇಳಿ ವಿರೋಧಿಸುವನು. ತಾನು, ತನ್ನದು ಎಂಬುದೆಲ್ಲವೂ ಶ್ರೀರಾಮನದೇ, ತಾನೂ ಮಾಡುವುದೆಲ್ಲವೂ ಶ್ರೀರಾಮನ ಪ್ರೀತಿಗಾಗಿ ಎಂದು ನಿರ್ಣಯಿಸಿದ್ದವನು. ಈ ಕಾರಣದಿಂದ ಸ್ವಪ್ರಯತ್ನವಿಲ್ಲದೆ ತಾನಾಗಿ ಬಂದ ರಾಜ್ಯವನ್ನು ಶ್ರೀರಾಮಾರ್ಪಣ ಮಾಡಿ ಉಜ್ಜೀವಿಸಿದವನು ಮಹಾತ್ಮನಾದ ಭರತ.

ಶ್ರೀರಾಮನನ್ನು ವನವಾಸದಿಂದ ವಿನಿವರ್ತಿಸಿ ರಾಜ್ಯಾಭಿಷೇಕ ಮಾಡಲು ಚಿತ್ರಕೂಟಕ್ಕೆ ಸಪರಿವಾರವಾಗಿ ಸೇನಾ ಮಂತ್ರಿ ಸಮೇತನಾಗಿ ಹೊರಟನು. ಶ್ರೀರಾಮನ ಅನುವರ್ತಿಯಾದ ಲಕ್ಷ್ಮಣದೇವನು ಭರತನು ದುರ್ಮತಿಯಾಗಿ ತಮಗೆ ಕೇಡು ಬಗೆಯಲು ಬರುತ್ತಿದ್ದಾನೆಂದು ಭಗವಂತನ ಕ್ಷೇಮಕ್ಕೆ ಬದ್ಧಕಂಕಣನಾಗಿ ಘೋರ್ಗರೆಯಲು, ಅವನನ್ನು ಸಮಾಧಾನಮಾಡಿ ಅವನ ಕಳವಳವು ಅಸಾಧುವೆಂದು ತಿಳಿಸಿ ಭರತನು ಧರ್ಮಾತ್ಮನೆಂದೂ ಅವನಿಂದ ಲಕ್ಷ್ಮಣನಿಗೇ ರಾಜ್ಯಕೊಡಿಸುವುದಾಗಿಯೂ ಶ್ರೀರಾಮನು ಭರತನಲ್ಲಿ ಪೂರ್ಣ ವಿಶ್ವಾಸವನ್ನು ವ್ಯಕ್ತಪಡಿಸಿದಾಗ, ಲಕ್ಷ್ಮಣನು ತನ್ನ ಅಂಧ ದೃಷ್ಟಿಗೆ ನಾಚಿ ಭಗವತ್ಕೈಂಕರ್ಯದ ನೆಪದಲ್ಲೂ ಭಾಗವತಾಪಚಾರವಾಗಬಾರದೆಂಬಂಶವನ್ನು ಮನಗಂಡನು. ಶ್ರೀರಾಮ-ಭರತರ ಮಿಲನವು ಪರಮಪದದಲ್ಲಿ ನಡೆಯುವ ಪರಮಾತ್ಮ – ಜೀವಾತ್ಮರ ಪರಿಷ್ವಂಗದಂತೆ ಅನುಭವವೇದ್ಯವಾದುದು. ಶ್ರೀರಾಮ – ಭರತರ ಸಂವಾದವು ಲೋಕಪಾವನವೂ, ಸುಬೋಧೆಯೂ ಆಗಿದೆ. ಸುಖ ದುಃಖಗಳನ್ನು ಸಮವಾಗಿ ತಿಳಿಯಬೇಕು. ತನ್ನ ತನ್ನ ಪಾಲಿಗೆ ಬಂದ ಭೋಗಭಾಗ್ಯಗಳನ್ನು ಭಗವಂತನ ಪದಗಳಲ್ಲಿ ಅರ್ಪಿಸಿ ಭಗವತ್ಪ್ರೀತ್ಯರ್ಥವಾಗಿ ಹರ್ಷಶೋಕಗಳಿಗೆ ಒಳಗಾಗದೆ ಅನುಭವಿಸಬೇಕೆಂಬಂಶವನ್ನು ಮನದಟ್ಟಾಗಿಸುವ ಒಂದು ಸನ್ನಿವೇಶ ಈ ಚಿತ್ರಕೂಟ ಪರ್ವ. ಧರ್ಮಾತ್ಮನಾದ ಭರತನು ಶ್ರೀರಾಮನ ಅನುಶಾಸನದಂತೆ ರಾಜ್ಯಭಾರವನ್ನು ಶ್ರೀರಾಮನ ಪಾದುಕಾವಲಂಬಿಯಾಗಿ ನಿರ್ವಹಿಸಿ ಧರ್ಮರಾಜ್ಯದಲ್ಲಿ ಮೂರ್ಧಾಭಿಷಿಕ್ತನಾಗಿ ಆಚಂದ್ರಾರ್ಕ ಕೀರ್ತಿಭಾಜನನಾಗಿ ನಮ್ಮ ಹೃದಯ ಸಾಮ್ರಾಜ್ಯದಲ್ಲಿ ಈಗಲೂ ಪ್ರತಿಷ್ಠಿತನಾಗಿದ್ದಾನೆ. "ಧರ್ಮ ಏವ ಜಯತೇ ನಾನೃತಂ" ಎಂಬ ಸನಾತನೋಕ್ತಿ ಸುಸಂಗತವಾಗಿದೆ.

## ಗೃಹಲಕ್ಷ್ಮಿ

# ಶ್ರೀರಾಮ ಪಾದ ಮಹಿಮೆ

ಡಿ. ಎಸ್. ಜಯಲಕ್ಷ್ಮಿ, ಬಿ.ಎ.

ಗೌತಮ ಋಷಿಗಳು ತಮ್ಮ ಪತ್ನಿಯಾದ ಅಹಲ್ಯೆಯೊಡನೆ ವಾಸಿಸುತ್ತಿದ್ದರು. ಗೌತಮರು ಮಹಾ ತಪಸ್ವಿಗಳು. ಅವರು ತಪೋಬಲ ಸಮನ್ವಿತರು. ನಿತ್ಯವೂ ಶುಚಿರ್ಭೂತರಾಗಿ ಸ್ನಾನಮಾಡಿ ದರ್ಭೆ ಸಮಿತ್ತುಗಳನ್ನು ಹಿಡಿದುಕೊಂಡು ಅಗ್ನಿದೇವನಂತೆ ಪ್ರಜ್ವಲಿಸುತ್ತ ಬರುತ್ತಿದ್ದರು. ಹೀಗೆ ಗೌತಮರು ತಪಸ್ಸನ್ನು ಆಚರಿಸುತ್ತಿದ್ದಾಗ ಅವರ ತಪವನ್ನು ಹೇಗಾದರೂ ಮಾಡಿ ಕೆಡಿಸಬೇಕು ಎಂದು ಯೋಚಿಸಿ ದೇವೇಂದ್ರನು ಕಾಯುತ್ತಿದ್ದನು.

ಒಂದು ದಿನ ಗೌತಮ ಋಷಿ ಹೊರಗೆ ಯಾವುದೋ ಕೆಲಸದ ಕಾರಣ ಹೋಗಿದ್ದರು. ಆ ಸಮಯದಲ್ಲಿ ದೇವೇಂದ್ರನು ಗೌತಮರಂತೆಯೇ ವೇಷ ಧರಿಸಿ ಅಹಲ್ಯೆಯ ಹತ್ತಿರ ಬಂದನು. ಅಹಲ್ಯಾದೇವಿಯು ಅಪ್ರತಿಮ ಸೌಂದರ್ಯವತಿಯಾಗಿದ್ದಳು. ಆಕೆಯ ರೂಪವನ್ನು ನೋಡಿ ದೇವೇಂದ್ರನು ಅಹಲ್ಯಾದೇವಿಯನ್ನು ಕಾಮಿಸಿದನು. ಆದರೆ ಅಹಲ್ಯೆಗೂ ಆಗ ಅರಿವಾಯಿತು 'ಈತನು ಗೌತಮನಲ್ಲ. ದೇವೇಂದ್ರನೇ ಬಂದಿರುವವನು' ಎಂದು. ಆದರೂ ಕೂಡ ದೇವರಾಜನಾದ ಇಂದ್ರನೇ ತನ್ನನ್ನು ಮೋಹಿಸಿದನಲ್ಲ ಎಂದು ತಿಳಿದು ಹೆಮ್ಮೆಯಿಂದ ಒಪ್ಪಿ ತಪ್ಪು ಮಾಡಿದಳು. ಗಾಬರಿಯಿಂದ ಪರ್ಣಶಾಲೆ ಬಿಟ್ಟು ದೇವೇಂದ್ರನು ಹೊರಟು ಹೋಗಬೇಕೆಂದು ಬರುತ್ತಿದ್ದಾಗ ಎದುರಿಗೆ ಗೌತಮ ಮಹರ್ಷಿಯು ದರ್ಭೆ ಸಮಿತ್ತುಗಳನ್ನು ಹಿಡಿದು ಅಗ್ನಿದೇವನಂತೆ ಬರುತ್ತಿದ್ದುದನ್ನು ಕಂಡು ಇಂದ್ರನಿಗೆ ನಡುಕವುಂಟಾಗಿ, ಆತನ ಮುಖವು ಗಾಬರಿಯಿಂದ ಬಾಡಿಹೋಯಿತು. ಗೌತಮರು ಮುನಿವೇಷಧಾರಿಯಾಗಿರುವ ಇಂದ್ರನನ್ನು ನೋಡಿ ಅವನು ಮಾಡಿದ ದುಷ್ಕಾರ್ಯವನ್ನು ಅರಿತು ಬಹಳಕೋಪದಿಂದ ದೇವೇಂದ್ರನಿಗೆ ಶಾಪವನ್ನು ಕೊಟ್ಟು ನಂತರ ತಮ್ಮ ಪತ್ನಿಯಾದ ಅಹಲ್ಯೆಗೆ ಈರೀತಿ ಶಾಪವನ್ನಿತ್ತರು. "ನೀನು ಸಾವಿರಾರು ವರ್ಷ ಆಹಾರವಿಲ್ಲದೆ ಉಸಿರಾಡುತ್ತ ಭೂಮಿಯ ಮೇಲೆ ಯಾರ ಕಣ್ಣಿಗೂ ಬೀಳದಂತೆ ಗಾಳಿಯನ್ನೇ ಸೇವಿಸುತ್ತ ಬಿದ್ದಿರು". ಆಗ ಅಹಲ್ಯೆಯು ಪಶ್ಚಾತ್ತಾಪದಿಂದ ಕಣ್ಣೀರಿಡುತ್ತಾ ಗೌತಮರನ್ನು ಪ್ರಾರ್ಥಿಸಿದಳು. 'ಒಂದಾನೊಂದು ಕಾಲದಲ್ಲಿ ದಶರಥ ಮಹಾರಾಜನ ಪುತ್ರನಾದ ಶ್ರೀರಾಮನು ಈ ಘೋರವಾದ ಅರಣ್ಯಕ್ಕೆ ಬಂದಾಗ ಅವನ ಪಾದ ಸ್ಪರ್ಶದಿಂದ ನೀನು ಪರಿಶುದ್ಧಳಾಗುವೆ' ಎಂದು ತಿಳಿಸಿ ಹಿಮವತ್ಪರ್ವದ ಹತ್ತಿರ ಒಂದು ಸ್ಥಳವನ್ನು ಆರಿಸಿ ತಪಸ್ಸು ಮಾಡಲು ಹೊರಟು ಹೋದರು.

ವಿಶ್ವಾಮಿತ್ರ ಋಷಿಯೊಡನೆ ಶ್ರೀರಾಮನು ಮಿಥಿಲಾನಗರಕ್ಕೆ ಬರುತ್ತ ರಮಣೀಯವಾದ ಆಶ್ರಮವನ್ನು ಪ್ರವೇಶಿಸಿ ಅಲ್ಲಿ ಯಾರೂ ಇಲ್ಲದುದನ್ನು ನೋಡಿ ಏಕೆ ಈ ಆಶ್ರಮದಲ್ಲಿ ಯಾರೂ ಇಲ್ಲ ಎಂದು ವಿಶ್ವಾಮಿತ್ರರಲ್ಲಿ ಪ್ರಶ್ನಿಸಿದಾಗ ಅವರು ಗೌತಮ ಋಷಿಯ ಮತ್ತು ಅಹಲ್ಯಾ ಶಾಪ ವೃತ್ತಾಂತವನ್ನು ವಿಶದವಾಗಿ ತಿಳಿಸಿ "ರಾಮ ಈ ವನದಲ್ಲಿರುವ ಅಹಲ್ಯಾದೇವಿಯನ್ನು ನಿನ್ನ ಪಾದಸ್ಪರ್ಶದಿಂದ ಉದ್ಧಾರ ಮಾಡು" ಎಂದರು. ಶ್ರೀರಾಮನು ವಿಶ್ವಾಮಿತ್ರ ಋಷಿಯ ಆದೇಶದಂತೆ ಅಗೋಚರಳಾಗಿದ್ದ ಮಹಾತ್ಮಳಾದ ಅಹಲ್ಯೆಯನ್ನು ಕಂಡನು. ಅಹಲ್ಯಾದೇವಿಯು ಮೊದಲಿಗಿಂತ ಕಾಂತಿಯುತ್ತಳಾಗಿ ಎದ್ದಳು. ಅಹಲ್ಯೆಯು ಶಾಪವಿಮೋಚನೆಯಾದುದನ್ನು ಜ್ಞಾನ ದೃಷ್ಟಿಯಿಂದ ಅರಿತು ಗೌತಮರೂ ಸಹ ಅಲ್ಲಿಗೆ ಬಂದರು. ಆ ದಂಪತಿಗಳು ಶ್ರೀರಾಮನನ್ನು ಸತ್ಕರಿಸಿದರು. ಶ್ರೀರಾಮನು ಅವರ ಸತ್ಕಾರವನ್ನು ಸಂತೋಷದಿಂದ ಸ್ವೀಕರಿಸಿದನು.



ಅಹಲ್ಯಾ ಶಾಪವಿಮೋಚನೆಯ ಪ್ರಕರಣದಲ್ಲಿ ಶ್ರೀರಾಮನ ಪಾದದ ಪ್ರಭಾವ ಅರಿವಾಯಿತು. ರಾಮಾವತಾರ ಕಾಲದಲ್ಲಿ ಶಿಲೆಯನ್ನು ಹೆಣ್ಣಾಗಿಸಿದನು. ಮತ್ತು ಕೃಷ್ಣಾವತಾರದಲ್ಲಿ ಬೂದಿಯನ್ನೇ ಕುಮಾರನನ್ನಾಗಿಸಿದನು.

ಆಳ್ವಾರ್‌ಗಳಲ್ಲಿ ಶ್ರೇಷ್ಠರಾದ ನಮ್ಮಾಳ್ವಾರ್ ಅವರು ಶ್ರೀರಾಮನ ಪಾದಗಳನ್ನು ಕೊಂಡಾಡುತ್ತಾರೆ. 'ಶ್ರೀದೇವಿ – ಭೂದೇವಿಯವರು ಹಿಡಿಯುವಂತಹ ಪಾದ. ಭಕ್ತರೆಲ್ಲರಿಗೂ ಆವಾಸ ಸ್ಥಾನವಾದ ಪಾದವೆಂದರೆ ಶ್ರೀರಾಮನ ಪಾದ. ಎಲ್ಲರಿಂದ ಸೇವಿಸಲ್ಪಡುವ ಪಾದ'. ಹೀಗೆ ಅಹಲ್ಯೆಯನ್ನು ಉದ್ಧರಿಸಿದ್ದು ಶ್ರೀರಾಮ ದಿವ್ಯಪಾದ. ಆದುದರಿಂದ ಪತಿವ್ರತೆಯರಲ್ಲಿ ಅಹಲ್ಯೆಗೆ ಪ್ರಥಮ ಸ್ಥಾನ.

"ಅಹಲ್ಯಾ ದ್ರೌಪದೀ<br>ಸೀತಾ ತಾರಾ ಮಂಡೋದರೀ ।<br>ಪಂಚ ಕನ್ಯಾ ಸ್ಮರೇನ್ನಿತ್ಯಂ<br>ಮಹಾ ಪಾತಕನಾಶನಮ್ ॥"

ಎನ್ನುವಾಗ ಅಹಲ್ಯೆಗೆ ಪ್ರಥಮ ಸ್ಥಾನ. ಇದಕ್ಕೆ ಕಾರಣವೆಂದರೆ ಭಗವಾನ್ ಶ್ರೀ ರಾಮಚಂದ್ರನ ದಿವ್ಯ ಪಾದದ ಸ್ಪರ್ಶದಿಂದ ಪುನೀತಳಾಗಿರುವುದು. ಇದರಿಂದ ಶ್ರೀರಾಮನ ಪಾದದ ಮಹಿಮೆ ಅಪಾರವಾದುದು ಎಂದು ನಾವು ಅರಿಯಬಹುದು. ★

( 9ನೇ ಪುಟದಿಂದ )

ನಂತೆ. ಎಲ್ಲೂ ನದಿಯನ್ನು ಕಾಣದೆ ನಿರಾಶನಾಗಿ ಶ್ರೀಮನ್ನಾರಾಯಣನನ್ನು ಕುರಿತು ತಪಗೈದನಂತೆ. ಅವನ ತಪಸ್ಸಿಗೆ ಮೆಚ್ಚಿ ದೇವರು ಪ್ರತ್ಯಕ್ಷನಾಗಿ, ಕಾವೇರಿಯು ಅಲ್ಲಿಯೇ ಗುಪ್ತಗಾಮಿನಿಯಾಗಿ ಹರಿಯುತ್ತಿರುವಳೆಂದೂ, ತ್ರೇತಾಯುಗದಲ್ಲಿ ತಾನು ಸೀತಾ ಸಮೇತನಾಗಿ ಬಂದು, ನದಿಯನ್ನು ಪ್ರಕಟ ಗೊಳಿಸುವುದಾಗಿಯೂ, ಋಷಿಯು ಅಲ್ಲಿಯೇ ತಪಸ್ಸು ಮಾಡಿಕೊಂಡಿರಬೇಕೆಂದೂ ಆಜ್ಞೆ ಮಾಡಿದನು. ಹಾಗೇ ಋಷಿಯು ತಪೋನಿರತನಾಗಿರಲು ಆ ಕಾಡಿನಲ್ಲಿ ವಾಸವಾಗಿ ಕ್ರೂರಕರ್ಮಾಸಕ್ತನಾಗಿದ್ದ ಜುಂಜುವೆಂಬ ಬೇಡನು ಋಷಿಯನ್ನು ಕೆಣಕಲೆಂದು ಬಂದು ಋಷಿಯ ಮಹಿಮೆಯಿಂದ ಅವನಿಗೆ ಶರಣಾಗತನಾಗಿ ಋಷಿಯ ಸೇವೆ ಮಾಡಿಕೊಂಡಿದ್ದನು. ರಾವಣ ಸಂಹಾರಾನಂತರ ಶ್ರೀರಾಮಚಂದ್ರನು ಅಯೋಧ್ಯೆಗೆ ಹಿಂತಿರುಗುವಾಗ, ಪುಷ್ಪಕ ವಿಮಾನದಿಂದ ಇಲ್ಲಿಳಿದು, ಭಕ್ತನಾದ ತೃಣಬಿಂದು ಮಹರ್ಷಿಯ ಅಭೀಷ್ಟವನ್ನು ಈಡೇರಿಸಲು, ಕಾವೇರಿಯು ಗುಪ್ತಗಾಮಿನಿಯಾಗಿ ಹರಿಯುತ್ತಿದ್ದ ಬಂಡೆಯನ್ನು ಛೇದಿಸಲು ಲಕ್ಷ್ಮಣನಿಗೆ ಆಜ್ಞೆ ಮಾಡಿದನು. ಲಕ್ಷ್ಮಣನ ಬಾಣದೇಟಿನಿಂದ ಸೀಳಿದ ಬಂಡೆಯಿಂದ ಬಂಧವಿಮುಕ್ತಗೊಂಡ ಕಾವೇರಿ ಉಕ್ಕಿ ಉಕ್ಕಿ ಹರಿದಳು. ಆ ಸ್ಥಳ ಧನುಷ್ಕೋಟಿಯೆಂದೇ ಹೆಸರಾಯಿತು. ಇಲ್ಲಿ ಸ್ನಾನಮಾಡಿದರೆ ರಾಮೇಶ್ವರ ಧನುಷ್ಕೋಟಿಯಲ್ಲಿ ಸ್ನಾನ ಮಾಡಿದಷ್ಟೇ ಫಲ ದೊರೆಯುವುದು. ಸೀತಾದೇವಿಯು ನಿರ್ಮಲೋದಕದಲ್ಲಿ ಮಿಂದು ಸಂತಸಗೊಂಡಳು. ಸೀತಾದೇವಿಯು ಸ್ನಾನಮಾಡಿದ ಸ್ಥಳ ಸೀತಾಮಡುವೆಂಬ ಹೆಸರು ಪಡೆಯಿತು. ಸುತ್ತಲೂ ಬಿಳಿಯ ನೀರು ತುಂಬಿ ಹರಿಯುತ್ತಿರುವ ನದಿಯಲ್ಲಿ ಸೀತಾಮಡುವಿನ ಬಂಡೆಯಿಂದ ಮಾತ್ರ ಅರಿಶಿನ ಬಣ್ಣದ ನೀರು ಆಶ್ಚರ್ಯಕರವಾಗಿ ಉಕ್ಕಿ ಹರಿಯುತ್ತದೆ. ಸುಮಂಗಲಿಯರು ಇಲ್ಲಿ ಸ್ನಾನ ಮಾಡಿದರೆ ಸೌಮಂಗಲ್ಯಾಭಿವೃದ್ಧಿಯನ್ನು ಹೊಂದುವರಂತೆ. ದೇವರು ಆ ವನಕ್ಕೆ ಜುಂಜಾರಣ್ಯವೆಂಬ ಹೆಸರೇ ಸ್ಥಿರವಾಗಲೆಂದೂ, ತಾನು ಅಲ್ಲೇ ನೆಲಸುವುದಾಗಿಯೂ, ತೃಣಬಿಂದು ಮಹರ್ಷಿಗೆ ಅಭಯವಿತ್ತು ಅಯೋಧ್ಯೆಗೆ ತೆರಳಿದನಂತೆ. ದಾಸನಾದ ತಾನು ಎದುರಿಗಿರುವಾಗ ದೇವರು ಲಕ್ಷ್ಮಣನಿಗೆ ಬಂಡೆಯನ್ನು ಸೀಳಲು ಆಜ್ಞೆ ಮಾಡಿದನೆಂದು ಬೇಸರಗೊಂಡು ಆಂಜನೇಯನು ದೇವರ ಬಳಿಯಿಂದ ದೂರ ಹೋಗಿ ನಿಂತನಂತೆ. ಆದಕ್ಕೇ ದೇವರ ಬಳಿ ಆಂಜನೇಯನ ವಿಗ್ರಹವಿಲ್ಲ. ಆಗ ಪರಮ ಕಾರಣಿಕನಾದ ಶ್ರೀರಾಮಚಂದ್ರಸ್ವಾಮಿ ಆಂಜನೇಯನನ್ನು ಸಂತೈಸಿ, ಸ್ನಾನ ಘಟ್ಟದ ಬಳಿ ಅವನಿಗೆ ಸ್ಥಳಕೊಟ್ಟು, ತನ್ನ ದರ್ಶನಕ್ಕೆ ಬರುವವರೆಲ್ಲರೂ ಮೊದಲು ಅವನ ಮಾಡಲೆಂದು ವರನಿತ್ತನಂತೆ. ತೃಣಬಿಂದು ಋಷಿಯು ಅಲ್ಲೇ ತಪೋನಿರತನಾಗಿದ್ದು ಕೆಲವು ಕಾಲಾನಂತರ ಜುಂಜುವಿನೊಡನೆ ಮುಕ್ತಿ ಹೊಂದಿದನು. ನದಿಗೆ ಒಂದು ಸಣ್ಣ ಅಣೆಕಟ್ಟನ್ನು ಇಲ್ಲಿ ಕಟ್ಟಿದ ಮೇಲೆ ಈ ಸ್ಥಳಕ್ಕೆ ಜುಂಜನಕಟ್ಟೆಯೆಂದೇ ಹೆಸರಾಯಿತು.

ಜುಂಜನ ಕಟ್ಟೆಯಲ್ಲಿ ವರುಷಕ್ಕೆ ಎರಡು ಬಾರಿ ವಿಶೇಷ ಉತ್ಸವಾದಿಗಳು ನಡೆಯುತ್ತವೆ. ಜನವರಿ 15ರಂದು ಬ್ರಹ್ಮೋತ್ಸವವು ಬಹು ವಿಜೃಂಭಣೆಯಿಂದ ನಡೆಯುತ್ತದೆ. ಸುತ್ತ ಮುತ್ತಲಿನ ಪ್ರದೇಶಗಳಿಂದ ಸಾವಿರಾರು ಜನ ಬಂದು ದೇವ ದರ್ಶನದಿಂದ ಕೃತಾರ್ಥರಾಗುತ್ತಾರೆ. ಜನವರಿ ತಿಂಗಳಿನಲ್ಲಿ ದನಗಳ ದೊಡ್ಡ ಜಾತ್ರೆಯೂ ನಡೆಯುತ್ತದೆ. ಶ್ರಾವಣ ಮಾಸದಲ್ಲಿ ಚಿಕ್ಕ ಜಾತ್ರೆಯಾಗುತ್ತದೆ. ಶ್ರೀರಾಮ ಭಕ್ತರೆಲ್ಲರೂ ಒಮ್ಮೆ ನೋಡಲೇ ಬೇಕಾದ ಸ್ಥಳ ಜುಂಜನಕಟ್ಟೆ.

---

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸಾಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರೂ. 2500 ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಿಲ ಮೇಲಿದ್ದು ನೋಡಬಹುದು. ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿವುಳ್ಳ 5 ಗ್ರಾಂ ತೂಕದ ಬಂಗಾರದ ಪದಕ ಕೊಡಲ್ಪಡುತ್ತದೆ, ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಅನುಮತಿಸಲಾಗುತ್ತದೆ.

ತಿರುಮಲೆ ತಿರುಪತಿ ದೇವಸ್ಥಾನ.

# ರಾಮಾಯಣದ ಎರಡು ಪಾತ್ರಗಳು

ಶ್ರೀಮದ್ರಾಮಾಯಣ ಹಿಂದೂಗಳ ಒಂದು ಮಹಾನ್ ಪವಿತ್ರ ಗ್ರಂಥ. ಒಂದು ಸಲ ವಾಲ್ಮೀಕಿ ಮುನಿಗಳು ಪ್ರಾತಃಸ್ನಾನಕ್ಕಾಗಿ ತಮಸಾ ನದಿಯ ದಡದಲ್ಲಿ ಬರುತ್ತಿರುವಾಗ ದಾರಿಯಲ್ಲಿ ಬೇಡನೊಬ್ಬನು, ಒಂದು ಜೊತೆ ಪಾರಿವಾಳಗಳು ಮಿಥುನ ಸುಖದಲ್ಲಿರಲು, ತನ್ನ ಬಾಣವನ್ನು ಅವುಗಳೆಡೆಗೆ ಬೀರಿದನು. ಆಗ ಗಂಡು ಹಕ್ಕಿಗೆ ಬಾಣ ತಗುಲಿ ಅದು ಕೆಳಗೆ ಬಿದ್ದು ವಿಲಿವಿಲಿ ಒದ್ದಾಡಿ ಸತ್ತು ಹೋಯಿತು. ಹೆಣ್ಣು ಹಕ್ಕಿಯು ಅದನ್ನು ನೋಡಿ ಆಕ್ರಂದನ ಮಾಡತೊಡಗಿತು. ಆಗ ಕರುಣಾಳುಗಳಾದ ವಾಲ್ಮೀಕಿ ಋಷಿಗಳು ಬೇಡನಿಗೆ 'ನೀನು ಇಂಥ ನೀಚ ಕೆಲಸಮಾಡಿದ್ದರಿಂದ ನಿನಗೆ ಎಂದೆಂದಿಗೂ ಸದ್ಗತಿ ಪ್ರಾಪ್ತವಾಗದಿರಲಿ' ಎಂದು ಶಾಪವನ್ನು ಕೊಟ್ಟರು. ನಂತರ ಥಟ್ಟನೆ ಅವರಿಗೆ ತಾವು ಕೋಪಗೊಂಡದ್ದರ ಅರಿವಾಗಿ ಪಶ್ಚಾತ್ತಾಪ ಪಡತೊಡಗಿದರು. ಆಗ ಬ್ರಹ್ಮನು ಪ್ರತ್ಯಕ್ಷನಾಗಿ ಮುಂದೆ ಇಂತಹದೇ ಒಂದು ಕಥೆ ನಡೆಯಲಿರುವುದರಿಂದ ಈ ಶೋಕ ಶ್ಲೋಕವಾಗಿ ಒಂದು ಮಹಾಕಾವ್ಯದ ರಚನೆ ನಡೆಯಲಿರುವುದು ಎಂದು ಹರಸಿ ಹೋದನು. ಇದೇ ರಾಮಾಯಣದ ನಾಂದಿಯಾಯಿತು.

ಈ ರಾಮಾಯಣವು ಕೇವಲ ಭಾರತದಲ್ಲಿ ಮಾತ್ರ ಅಲ್ಲದೇ ಶ್ರೀಲಂಕಾ, ಚೀನಾ, ಇಂಡೋನೇಶಿಯಾ, ರಶಿಯಾ ಮುಂತಾದ ವಿದೇಶಗಳಲ್ಲಿಯೂ ಹರಡಿದ್ದು ಆಯಾ ದೇಶ, ಕಾಲ, ವರ್ತಮಾನಗಳಿಗೆ ಅನುಗುಣವಾಗಿ ಬದಲಾಯಿಸಿದೆ. ಬೌದ್ಧರು ಮತ್ತು ಜೈನರು ರಾಮಾಯಣವನ್ನು ಬರೆದಿದ್ದಾರೆ.

ಪ್ರಸ್ತುತ ಲೇಖನದಲ್ಲಿ ವಾಲ್ಮೀಕಿ ರಾಮಾಯಣವನ್ನು ಆಧರಿಸಿ ನಾವು ಎರಡು ಸ್ತ್ರೀ ಪಾತ್ರಗಳನ್ನು ನೋಡಬಹುದು, ತಮ್ಮ ಆಚರಣೆಯಿಂದಾಗಿ ಇವೆರಡೂ ಪಾತ್ರಗಳು ಕುಖ್ಯಾತಿ ಹೊಂದಿವೆ.

ರಾಮಾಯಣದ ಮಹಾ ಕಥೆಗೆ ಮೂಲ ಕಾರಣ ಕೈಕೇಯಿ. ಈಕೆ ಕೇಕಯ ರಾಜನ ಮುದ್ದಿನ ಮಗಳು. ದಶರಥ ರಾಜನ ಮೋಹದ ಮಡದಿ. ಅಪ್ರತಿಮ ರೂಪವತಿ. ಹಾಗೆಯೇ ವೀರಾಗ್ರಣಿ. ಒಮ್ಮೆ ದೇವಾಸುರ ಸಂಗ್ರಾಮದಲ್ಲಿ ದಶರಥ ಮಹಾರಾಜನು ದೇವತೆಗಳಿಗೆ ಬೆಂಬಲವಾಗಿ ದಾನವರೊಡನೆ ಯುದ್ಧ ಮಾಡುವಾಗ ರಥದ ಗಾಲಿಯ ಕೀಲು ಮುರಿಯಲು ದಶರಥನ ಪಕ್ಕದಲ್ಲಿ ಕುಳಿತಿದ್ದ ಕೈಕೇಯಿಯು ರಥದಿಂದ ಜಿಗಿದು ಕೀಲಿಗೆ ಬದಲಾಗಿ ತನ್ನ ಕೈಯನ್ನೇ ಆಸರೆಯಾಗಿಟ್ಟು ರಥದ ಚಲನೆಗೆ ಅಡ್ಡಿಯಾಗದಂತೆ ನಡೆಸಿ ದಶರಥನ ಯಶಸ್ಸಿಗೆ ಕಾರಣಳಾದಳು. ಸಂತುಷ್ಟಗೊಂಡ ಸಾರ್ವಭೌಮನು ಎರಡು ವರವನ್ನು ಬೇಡಿಕೋ ಎಂದು ಹೇಳಲು ಕೈಕೇಯಿಯು ಸಮಯ ಬಂದಾಗ ಬೇಡುತ್ತೇನೆ ಎಂದಳು.

ಸಮಯ ಬಂದಿತು. ದಶರಥನು ತನ್ನ ಹಿರಿಯ ಪುತ್ರನಾದ ಶ್ರೀರಾಮನಿಗೆ ಯೌವರಾಜ್ಯಾಭಿಷೇಕವನ್ನು ಮಾಡಲು ನಿಶ್ಚಯಿಸಿ ತನ್ನ ಪಟ್ಟದ ರಾಣಿಯರಿಗೆಲ್ಲಾ ಈ ಸುದ್ದಿಯನ್ನು ತಿಳುಹಿದನು. ಇದರಿಂದ ಕೈಕೇಯಿಗೂ ಸಂತೋಷವೇ ಆಯಿತು. ರಾಮ ಅವಳ ಪ್ರಾಣ ಪದಕ. ಸ್ವಂತ ಮಗನಾದ ಭರತನಿಗಿಂತಲೂ ಹೆಚ್ಚು ವಾತ್ಸಲ್ಯ ಅವನಲ್ಲಿ. ಆದರೆ ಅವಳ ದುಷ್ಟಳಾದ ದಾಸಿ ಮಂಥರೆ ಅವಳಲ್ಲಿ ವಿಷ ಬೀಜವನ್ನು ಬಿತ್ತಿದಳು. 'ಕೌಸಲ್ಯೆಗೆ ಈಗಲೇ ತಾನು ಹಿರಿಯ ರಾಣಿ ಎಂಬ ಜಂಬವಿದೆ. ನೀನು ರಾಜನ ಮೋಹದ ಮಡದಿಯಾಗಿ ಕೌಸಲ್ಯೆಯನ್ನು ಎಷ್ಟೋ ಸಲ ಅಪಮಾನ ಗೊಳಿಸಿದ್ದೀಯೆ. ನಾಳೆ ಅವಳು ಹಿರಿಯ ರಾಣಿ ಅಷ್ಟೇ ಅಲ್ಲ ರಾಜ ಮಾತೆಯಾಗುತ್ತಾಳೆ. ಇಡೀ ರಾಷ್ಟ್ರ ಅವಳನ್ನು ಗೌರವಿಸುತ್ತದೆ, ನೀನು ಈಗ ಮಾಡಿದ ಅಪಮಾನಗಳಿಗೆ ಪ್ರತಿಯಾಗಿ ಅವಳು ಸಮಯ ಸಿಕ್ಕಿರುವಾಗ ನಿನಗೆ ಏನೂ ಮಾಡದೇ ಹೋಗುವಳೇ. ನೀನು ಮತ್ತು ನಿನ್ನ ಮಗ ಅವಳ ದಾಸಾನುದಾಸರಾಗಿ ಬಿದ್ದಿರಬೇಕಾಗುತ್ತದೆ ಎಚ್ಚರಿಕೆ' ಎಂದಳು.

ಈ ಸವತಿ ಮಾತ್ಸರ್ಯದ ಹಾಲಾಹಲವು ಕೈಕೇಯಿಯ ಬುದ್ಧಿಯನ್ನು ಭ್ರಷ್ಟಗೊಳಿಸಿತು. ಅವಳು ದಶರಥ ಮಹಾರಾಜನನ್ನು ಬೇಡಿದಳು, ಒಂದು ವರದಿಂದ ರಾಮನಿಗೆ ಹದಿನಾಲ್ಕು ವರ್ಷ ವನವಾಸ, ಇನ್ನೊಂದು ವರದಿಂದ ಭರತನಿಗೆ ಪಟ್ಟಾಭಿಷೇಕ. ದಶರಥನು ಬೆಚ್ಚಿದನು. ನಗಾರಿಗಳನ್ನು ಬಡಿಯುತ್ತಿದ್ದ ಕೈಗಳು ಹಾಗೆಯೇ ನಿಂತು ಹೋದವು. ವಾದ್ಯಗಳು ಶೋಕ ಗೀತೆಗಳನ್ನು ಬಾಜಿಸಿದವು. ಇಡೀ ನಗರ ಕೈಕೇಯಿಗೆ ಹಿಡಿಶಾಪ ಹಾಕಿತು. ರಾಮ, ಲಕ್ಷ್ಮಣ, ಸೀತೆಯರು ವಲ್ಕಲಗಳನ್ನು ಕಾಡಿಗೆ ಹೋದರು. ಅವರ ಜೊತೆಯಲ್ಲಿ ದಶರಥನ ಪ್ರಾಣಗಳೂ ಹೋದವು. ಭರತನು ಬಂದನು. ಆದರೆ ಅವನು ತಾಯಿಯನ್ನೂ ಚೆನ್ನಾಗಿ ಛೀಮಾರಿ ಹಾಕಿ ಪುರವನ್ನು ತ್ಯಜಿಸಿ ವಲ್ಕಲಗಳನ್ನು ಧರಿಸಿ ನಂದಿಗ್ರಾಮಕ್ಕೆ ಹೊರಟು ಹೋದನು.

ಇತ್ತ ಕೈಕೇಯಿಯು ತನ್ನ ಯಾವ ಬಯಕೆಯೂ ಫಲಿಸದೆ ವಿಧವೆಯಾಗಿ ಸವತಿಯರಿಂದಲೂ ನಾಗರಿಕರಿಂದಲೂ ಕೊನೆಗೆ ತನ್ನ ಮಗನಿಂದಲೂ ತಿರಸ್ಕೃತಳಾಗಿ ಅವಮಾನ ದುಃಖಗಳಲ್ಲಿ ಬೆಂದು ನೊಂದಳು. ರಾಮಾಯಣದಲ್ಲಿ ಈಕೆಯದು ಒಂದು ದುರಂತ ಪಾತ್ರ.

* * * *

ಹುಣ್ಣಿಮೆಯ ಪ್ರಶಾಂತ ಬೆಳದಿಂಗಳು. ಎದುರಿಗೆ ಸರಯೂನದಿ ಗಂಭೀರವಾಗಿ ಹರಿ

**ಶ್ರೀಮತಿ ಡಿ. ಎಸ್. ಹೇಮಾವತಿ**

ಯುತ್ತಿದೆ. ಮಂದ ಮಾರುತ ಕಾಡು ಹೂಗಳ ಪರಿಮಳವನ್ನು ಹೊತ್ತು ತರುತ್ತಿದ್ದಾನೆ. ಪ್ರಕೃತಿ ಪ್ರಶಾಂತವಾಗಿದೆ. ಎಲೆಮನೆಯ ಹೊರಗೆ ಸೀತಾ ರಾಮರು ಜಗಲಿಯ ಮೇಲೆ ಕುಳಿತು ಸಂತೋಷದಿಂದ ಪ್ರಕೃತಿಯನ್ನು ವೀಕ್ಷಿಸುತ್ತಿದ್ದಾರೆ. ಸ್ವಲ್ಪ ದೂರದಲ್ಲಿ ಧನುರ್ಧಾರಿಯಾದ ಲಕ್ಷ್ಮಣ ಸೀತಾ ರಾಮರನ್ನು ಕಾವಲು ಕಾಯುತ್ತಾ ಶತಪಥ ಹಾಕುತ್ತಿದ್ದಾನೆ.

ಇದ್ದಕ್ಕಿದ್ದ ಹಾಗೆಯೇ ಶ್ರೀರಾಮನ ಎದುರಿಗೆ ದಿವ್ಯವಾದ ಸ್ತ್ರೀರೂಪದಿಂದ ಒಬ್ಬಳು ತನ್ನ ಹಾವ ಭಾವ ವಿಲಾಸಗಳಿಂದ ನಿಂತಳು. ಅಲ್ಲದೆ ಶ್ರೀರಾಮನನ್ನು ತನ್ನೆಡೆಗೆ ಸೆಳೆಯಲು ತನ್ನ ವಿಲಾಸವನ್ನು ಪ್ರಕಟಿಸಿದಳು. ಶ್ರೀರಾಮ ಕೇಳಿದ – 'ಭದ್ರೆ ಇಂತಹ ನಿಶೆಯಲ್ಲಿ ಏಕಾಂಗಿಯಾಗಿ ಇಲ್ಲಿ ಬಂದಿರುವ ನೀನಾರು. ಬಂದ ಉದ್ದೇಶವೇನು' ಅವಳು ಹೇಳಿದಳು.

'ಸುಂದರಾಂಗನೇ! ನಾನು ಬಂದಿರುವ ಉದ್ದೇಶ ನಿನ್ನನ್ನು ವರಿಸುವುದೇ ಆಗಿದೆ. ನಾನು ನಿನ್ನ ಸೌಂದರ್ಯದಿಂದ ಮೋಹಿತಳಾಗಿದ್ದೇನೆ. ನಾನು ಲಂಕಾಧಿಪತಿಯಾದ ರಾವಣನ ತಂಗಿ ಶೂರ್ಪಣಖಿ'. ರಾಮ ಹೇಳಿದ. 'ಶೂರ್ಪನಖಿ ನಾನು ವಿವಾಹಿತನಿದ್ದೇನೆ. ಅಲ್ಲಿ ನೋಡು, ನನಗಿಂತಲೂ ಸುಂದರನಾದ ಯುವಕನಾದ ನನ್ನ ತಮ್ಮ ಲಕ್ಷ್ಮಣ ಅಲ್ಲಿ ಒಂಟಿಯಾಗಿ ನಿಂತಿದ್ದಾನೆ. ನೀನು ಅವನ ಬಳಿ ಹೋಗು' ಶೂರ್ಪನಖಿ ಲಕ್ಷ್ಮಣನ ಬಳಿ ಬಂದು ಅವಳನ್ನು ಪೀಡಿಸಲಾರಂಭಿಸಿದಳು. ಲಕ್ಷ್ಮಣನು ಎಷ್ಟು ವಿಧವಾಗಿ ಹೇಳಿದರೂ ಕೇಳಲಿಲ್ಲ. ಆಗ ಲಕ್ಷ್ಮಣನು ಕೋಪಗೊಂಡು ಅವಳ ಕಿವಿ ಮತ್ತು ಮೂಗುಗಳನ್ನು ಕತ್ತರಿಸಿ ಹಾಕಿದನು.

ದಿವ್ಯ ಸ್ತ್ರೀ ರೂಪವನ್ನು ಧರಿಸಿದ್ದ ಶೂರ್ಪನಖಿ ಮತ್ತೆ ಘೋರಾಕೃತಿಯನ್ನು ಯನ್ನು ಪಡೆದು ವಿಕೃತ ಸ್ವರದಿಂದ ಕೂಗುತ್ತಾ ರಾವಣನ ಆಸ್ಥಾನಕ್ಕೆ ಬಂದು ತನ್ನ ದುರವಸ್ಥೆಯನ್ನು ಹೇಳಿಕೊಂಡಳು. ರಾವಣ ಅಷ್ಟಾಗಿ ಗಮನ ಕೊಡದಿರಲು ಕಾಮುಕನಾದ ಅವನಿಗೆ ಸೀತೆಯ ಸುಂದರ ರೂಪವನ್ನು ವರ್ಣಿಸಿ ಅವಳನ್ನು ಹೊತ್ತು ತರುವಂತೆ ಪ್ರೇರೇಪಿಸಿದಳು.

ಇದೇ ರಾಮ ರಾವಣರ ಯುದ್ಧಕ್ಕೆ ನಾಂದಿಯಾಯಿತು. ರಾವಣನು ಶೂರ್ಪನಖಿಯ ಮಾತಿನಂತೆ ಸೀತೆಯನ್ನು ಹೊತ್ತು ತಂದು ಅಶೋಕವನದಲ್ಲಿ ಇಟ್ಟನು. ಸೀತೆಯನ್ನು ಹುಡುಕಿಕೊಂಡು ಬಂದ ಹನುಮಂತ ಬಂಗಾರದ ಲಂಕೆಯನ್ನು ಸುಟ್ಟು ಭಸ್ಮಮಾಡಿದ. ರಾಮನು ವಾನರ ಸೇನೆಯೊಡನೆ ಬಂದು ಘೋರವಾದ ಯುದ್ಧದಲ್ಲಿ ರಾವಣ ಕುಂಭಕರ್ಣರನ್ನು ಸಂಹಾರ ಮಾಡಿದ. ಇಂದ್ರಜಿತ್ತುವಿನ ವಧೆಯೂ ಆಯಿತು. ಲಂಕೆ ಹಾಳು ಬಿದ್ದು ಹೋಯಿತು. ವಿಭೀಷಣನು ರಾಮ ಮತ್ತು ಹನುಮಂತನಿಗೂ ನಮ್ರತೆಯಿಂದ ಶರಣಾಗಿರಲು ರಾಮನು ವಿಭೀಷಣನನ್ನು ಮೆಚ್ಚಿ ಅವನಿಗೆ ಲಂಕೆಯ ಅಧಿಪತಿಯನ್ನಾಗಿ ಮಾಡಿ ಅವನನ್ನು ಸಿಂಹಾಸನದ ಮೇಲೆ ಕೂಡಿಸಿದ.

ಕೈಕೇಯಿಯ ಸವತಿ ಮಾತ್ಸರ್ಯವು ಅವಳನ್ನು ಕುಖ್ಯಾತಳನ್ನಾಗಿ ಮಾಡಿದಂತೆ ಶೂರ್ಪನಖಿಯ ಕಾಮವು ಇಡೀ ಲಂಕೆಯನ್ನೇ ನಾಶಗೊಳಿಸಿತು. ರಾಮಾಯಣ ಮಹಾ ಕಾವ್ಯದಲ್ಲಿ ಇವರಿಬ್ಬರೂ ಕುಖ್ಯಾತ ಮಹಿಳೆಯರಾಗಿದ್ದಾರೆ. ★

# ಶ್ರೀಮದ್ಭಗವದ್ಗೀತೆ

ಶ್ರೀಮದ್ಭಗವದ್ಗೀತೆ ಭಾರತೀಯರಿಗೆ ಸುಪರಿಚಿತವಾದದ್ದು. ಮಾನವನ ಅನುದಿನದ ಸಂಕಟ, ಸಂಶಯ, ಸಮಸ್ಯೆಗಳಿಗೆಲ್ಲ ಪರಂಪರಾನುಗತವಾಗಿ ಪರಿಹಾರವನ್ನು ಸೂಚಿಸುತ್ತ ಬಂದಿರುವ, ಮಹತ್ವಪೂರ್ಣ ತಾತ್ವಿಕ ಕೃತಿ ಇದು. ಅಸಂಖ್ಯಾತ ವಾಚಕರ ಅಭಿಪ್ರಾಯದ ಮೇರೆಗೆ ಭಗವದ್ಗೀತೆಯನ್ನು ಸಪ್ತಗಿರಿ ಧಾರಾವಾಹಿಯಾಗಿ ಪ್ರಕಟಿಸುತ್ತಿದೆ.

ಸಂ ||

## ಕುರುಕ್ಷೇತ್ರದಲ್ಲಿ ಸೇನೆಗಳು ಸಜ್ಜುಗೊಳ್ಳುವಿಕೆ

ಧೃತರಾಷ್ಟ್ರ ಉವಾಚ :

ಧರ್ಮಕ್ಷೇತ್ರೇ ಕುರುಕ್ಷೇತ್ರೇ
ಸಮವೇತಾ ಯುಯುತ್ಸವಃ ।
ಮಾಮಕಾಃ ಪಾಂಡವಾಶ್ಚೈವ
ಕಿಮಕುರ್ವತ ಸಂಜಯ ॥ 1

ಧೃತರಾಷ್ಟ್ರ: ಸಂಜಯನೇ, ಯುದ್ಧದ ಬಯಕೆಯಿಂದ ಧರ್ಮ ಭೂಮಿಯಾದ ಕುರುಕ್ಷೇತ್ರದಲ್ಲಿ ಕಲೆತ ನನ್ನ ಮಕ್ಕಳೂ ಪಾಂಡವರೂ ಏನು ಮಾಡಿದರು ?

ಸಂಜಯ ಉವಾಚ :

ದೃಷ್ಟ್ವಾ ತು ಪಾಂಡವಾನೀಕಂ
ವ್ಯೂಢಂ ದುರ್ಯೋಧನಸ್ತದಾ ।
ಆಚಾರ್ಯಮುಪಸಂಗಮ್ಯ
ರಾಜಾ ವಚನಮಬ್ರವೀತ್ ॥ 2

ಸಂಜಯ: ಪಾಂಡವರ ದಂಡು ಸಜ್ಜಾಗಿ ನಿಂತಿದ್ದುದನ್ನು ನೋಡಿದ ಅರಸನಾದ ದುರ್ಯೋಧನನು ಗುರುಗಳಾದ ದ್ರೋಣರ ಬಳಿಗೆ ಬಂದು ಹೀಗೆ ಹೇಳಿದನು:

ಪಶ್ಯೈತಾಂ ಪಾಂಡುಪುತ್ರಾಣಾಂ
ಆಚಾರ್ಯ ಮಹತೀಂ ಚಮೂಮ್ ।
ವ್ಯೂಢಂ ದ್ರುಪದಪುತ್ರೇಣ
ತವ ಶಿಷ್ಯೇಣ ಧೀಮತಾ ॥ 3

ಗುರುಗಳೇ, ದ್ರುಪದರಾಜನ ಮಗ, ನಿಮ್ಮ ಶಿಷ್ಯ ಬುದ್ಧಿಶಾಲಿಯಾದ ಧೃಷ್ಟದ್ಯುಮ್ನ ಪಾಂಡವರ ಈ ದೊಡ್ಡ ದಂಡನ್ನು ಸಜ್ಜುಗೊಳಿಸಿರುವುದನ್ನು ನೋಡಿರಿ.

ಅತ್ರ ಶೂರಾ ಮಹೇಷ್ವಾಸಾ
ಭೀಮಾರ್ಜುನಸಮಾ ಯುಧಿ ।
ಯುಯುಧಾನೋ ವಿರಾಟಶ್ಚ
ದ್ರುಪದಶ್ಚ ಮಹಾರಥಃ ॥ 4

ಈ ದಂಡಿನಲ್ಲಿ ಹೋರಾಟದಲ್ಲಿ ಭೀಮಾರ್ಜುನರಿಗೆ ಸರಿಜೋಡಿಯಾದ ಶೂರರಾಗಿ ದೊಡ್ಡ ದೊಡ್ಡ ಬಿಲ್ಲುಗಳನ್ನು ಹಿಡಿದುಕೊಂಡು ಕಾದುವುದರಲ್ಲಿ ಕುಶಲರಾದ ಸಾತ್ಯಕಿ ವಿರಾಟರಿದ್ದಾರೆ. ಹತ್ತು ಸಾವಿರ ಜನರೊಡನೆ ಏಕಾಕಿಯಾಗಿ ಹೋರಾಡಬಲ್ಲ ದ್ರುಪದನಿದ್ದಾನೆ.

ಧೃಷ್ಟಕೇತುಶ್ಚೇಕಿತಾನಃ
ಕಾಶಿರಾಜಶ್ಚ ವೀರ್ಯವಾನ್ ।
ಪುರುಜಿತ್ ಕುಂತೀಭೋಜಶ್ಚ
ಶೈಬ್ಯಶ್ಚ ನರಪುಂಗವಃ ॥ 5

ಧೃಷ್ಟಕೇತು, ಚೇಕಿತಾನ, ವೀರನಾದ ಕಾಶೀರಾಜ, ಪುರುಜಿತು, ಕುಂತೀಭೋಜ, ಮತ್ತು ಮನುಷ್ಯರಲ್ಲಿ ಶ್ರೇಷ್ಠನಾದ ಶೈಬ್ಯ ಇವರೆಲ್ಲ ಇದ್ದಾರೆ.

ಯುಧಾಮನ್ಯುಶ್ಚ ವಿಕ್ರಾಂತ
ಉತ್ತಮೌಜಾಶ್ಚ ವೀರ್ಯವಾನ್ ।
ಸೌಭದ್ರೋ ದ್ರೌಪದೇಯಾಶ್ಚ
ಸರ್ವ ಏವ ಮಹಾರಥಾಃ ॥ 6

ಬಲಶಾಲಿಯಾದ ಯುಧಾಮನ್ಯು, ವೀರನಾದ ಉತ್ತಮೌಜ, ಸುಭದ್ರೆಯ ಮಗ ಅಭಿಮನ್ಯು ಮತ್ತು ದ್ರೌಪದಿಯ ಮಕ್ಕಳು ಇದ್ದಾರೆ. ಒಬ್ಬೊಬ್ಬರೂ ಹತ್ತು ಸಹಸ್ರ ಜನರೊಡನೆ ಹೋರಾಡಬಲ್ಲ ಮಹಾರಥರು.

ಅಸ್ಮಾಕಂ ತು ವಿಶಿಷ್ಟಾ ಯೇ
ತಾನ್ನಿಬೋಧ ದ್ವಿಜೋತ್ತಮ ।
ನಾಯಕಾ ಮಮ ಸೈನ್ಯಸ್ಯ
ಸಂಜ್ಞಾರ್ಥಂ ತಾನ್ಬ್ರವೀಮಿ ತೇ ॥ 7

ಬ್ರಾಹ್ಮಣ ಶ್ರೇಷ್ಠರೇ, ನಮ್ಮ ಕಡೆಯಲ್ಲಿರುವ ವೀರರನ್ನು ನೆನಪಿಗೆ ತಂದುಕೊಳ್ಳಿ. ತಮಗೆ ನೆನಪಾಗಲೆಂದು ಅವರ ಹೆಸರುಗಳನ್ನು ಹೇಳುತ್ತೇನೆ.

ಭವಾನ್ ಭೀಷ್ಮಶ್ಚ ಕರ್ಣಶ್ಚ
ಕೃಪಶ್ಚ ಸಮಿತಿಂಜಯಃ ।
ಅಶ್ವತ್ಥಾಮಾ ವಿಕರ್ಣಶ್ಚ
ಸೌಮದತ್ತಿರ್ಜಯದ್ರಥಃ ॥



ತಾವು, ಭೀಷ್ಮ, ಕರ್ಣ, ಜಯಶೀಲನಾದ ಕೃಪ, ಅಶ್ವತ್ಥಾಮ, ವಿಕರ್ಣ, ಸೋಮದತ್ತನ ಮಗನಾದ ಭೂರಿಶ್ರವ ಮತ್ತು ಜಯದ್ರಥ.

ಅನ್ಯೇ ಚ ಬಹವಃ ಶೂರಾಃ
ಮದರ್ಥೇ ತ್ಯಕ್ತಜೀವಿತಾಃ ।
ನಾನಾಶಸ್ತ್ರಪ್ರಹರಣಾಃ
ಸರ್ವೇ ಯುದ್ಧವಿಶಾರದಾಃ ॥ 9

ಇನ್ನೂ ಅನೇಕ ಶೂರರು ನನಗಾಗಿ ಜೀವ ತೆರಲು ಸಿದ್ಧರಾಗಿ ಇದ್ದಾರೆ. ಎಲ್ಲರೂ ಎಲ್ಲ ಬಗೆಯ ಆಯುಧಗಳನ್ನೂ ಉಪಯೋಗಿಸಬಲ್ಲರು ಮತ್ತು ಯುದ್ಧದಲ್ಲಿ ಗಟ್ಟಿಗರು.

ಅಪರ್ಯಾಪ್ತಂ ತದಸ್ಮಾಕಂ
ಬಲಂ ಭೀಷ್ಮಾಭಿರಕ್ಷಿತಮ್ ।
ಪರ್ಯಾಪ್ತಂ ತ್ವಿದಮೇತೇಷಾಂ
ಬಲಂ ಭೀಮಾಭಿರಕ್ಷಿತಮ್ ॥ 10

ಭೀಷ್ಮರ ರಕ್ಷಣೆಗೆ ಒಳಪಟ್ಟಿರುವ ನಮ್ಮ ದೊಡ್ಡ ಈ ದಂಡೂ ಸಾಲದೇನೋ ಎನಿಸುತ್ತಿದೆ. ಭೀಮನ ರಕ್ಷಣೆಗೆ ಒಳಪಟ್ಟಿರುವ ಪಾಂಡವರ ಆ ಸೇನೆ ಸಾಕಷ್ಟು ಸಮರ್ಥವಾಗಿದೆ.

ಅಯನೇಷು ಚ ಸರ್ವೇಷು
ಯಥಾಭಾಗಮವಸ್ಥಿತಾಃ ।
ಭೀಷ್ಮಮೇವಾಭಿರಕ್ಷಂತು
ಭವಂತಃ ಸರ್ವ ಏವ ಹಿ ॥ 11

ನೀವೆಲ್ಲರೂ ದಂಡಿನ ಬೇರೆ ಬೇರೆ ಮಾರ್ಗಗಳಲ್ಲಿ ನಿಮ್ಮ ನಿಮ್ಮ ಪಾಲಿಗೆ ಬಂದ ಕಡೆ ಇದ್ದುಕೊಂಡು ಭೀಷ್ಮನನ್ನು ರಕ್ಷಿಸಿರಿ.

ತಸ್ಯ ಸಂಜನಯನ್ ಹರ್ಷಂ
ಕುರುವೃದ್ಧಃ ಪಿತಾಮಹಃ ।
ಸಿಂಹನಾದಂ ವಿನದ್ಯೋಚ್ಚೈಃ
ಶಂಖಂ ದಧ್ಮೌ ಪ್ರತಾಪವಾನ್ ॥ 12

ಹೀಗೆಂದು ಹೇಳಿದ ದುರ್ಯೋಧನನಿಗೆ ಹರ್ಷ ಉಂಟಾಗುವಂತೆ ಆಗ ಕುರುವಂಶದ ಹಿರಿಯ ಕೌರವರ ಅಜ್ಜ, ಪರಾಕ್ರಮಶಾಲಿ ಭೀಷ್ಮನು ಗಟ್ಟಿಯಾಗಿ ಸಿಂಹನಾದ ಮಾಡಿ ಶಂಖವನ್ನು ಊದಿದನು.

ತತಃ ಶಂಖಾಶ್ಚ ಭೇರ್ಯಶ್ಚ
ಪಣವಾನಕಗೋಮುಖಾಃ ।
ಸಹಸೈವಾಭ್ಯಹನ್ಯಂತ
ಸ ಶಬ್ದಸ್ತುಮುಲೋಽಭವತ್ ॥ 13

ಆಮೇಲೆ ಒಮ್ಮೆಲೆ ಶಂಖಗಳು, ಭೇರಿಗಳು, ನಗಾರಿಗಳು, ರಣವಾದ್ಯಗಳೂ ಮೊಳಗಿದವು. ಆ ಗದ್ದಲವು ಎಲ್ಲೆಲ್ಲಿಯೂ ತುಂಬಿತು.

ತತಃ ಶ್ವೇತೈರ್ಹಯೈರ್ಯುಕ್ತೇ
ಮಹತಿ ಸ್ಯಂದನೇ ಸ್ಥಿತೌ ।
ಮಾಧವಃ ಪಾಂಡವಶ್ಚೈವ
ದಿವ್ಯೌ ಶಂಖೌ ಪ್ರದಧ್ಮತುಃ ॥ 14

ಆಮೇಲೆ ಬಿಳೀ ಕುದುರೆಗಳನ್ನು ಹೂಡಿದ ದೊಡ್ಡ ತೇರಿನ ಮೇಲೆ ಕುಳಿತಿದ್ದ ಕೃಷ್ಣನೂ ಅರ್ಜುನನೂ ಹೆಸರುವಾಸಿಯಾದ ತಮ್ಮ ಶಂಖಗಳನ್ನು ಊದಿದರು.

ಪಾಂಚಜನ್ಯಂ ಹೃಷೀಕೇಶೋ
ದೇವದತ್ತಂ ಧನಂಜಯಃ ।
ಪೌಂಡ್ರಂ ದಧ್ಮೌ ಮಹಾಶಂಖಂ
ಭೀಮಕರ್ಮಾ ವೃಕೋದರಃ ॥ 15

ಕೃಷ್ಣನು ಪಾಂಚಜನ್ಯವನ್ನೂ, ಅರ್ಜುನನು ದೇವದತ್ತವನ್ನೂ, ಶತ್ರುಗಳನ್ನು ಎದೆಗೆಡಿಸುವ ಭೀಮನು ಪೌಂಡ್ರವೆಂಬ ದೊಡ್ಡ ಶಂಖವನ್ನೂ ಊದಿದರು.

ಅನಂತವಿಜಯಂ ರಾಜಾ
ಕುಂತೀಪುತ್ರೋ ಯುಧಿಷ್ಠಿರಃ ।
ನಕುಲಃ ಸಹದೇವಶ್ಚ
ಸುಘೋಷಮಣಿಪುಷ್ಪಕೌ ॥ 16

ಕುಂತಿಯ ಹಿರಿಯ ಮಗ, ಅರಸನಾದ ಧರ್ಮರಾಯನು ಅನಂತ ವಿಜಯವನ್ನೂ, ನಕುಲನು ಸುಘೋಷವನ್ನೂ, ಸಹದೇವನು ಮಣಿಪುಷ್ಪಕವನ್ನೂ ಊದಿದರು.

ಕಾಶ್ಯಶ್ಚ ಪರಮೇಷ್ವಾಸಃ
ಶಿಖಂಡೀ ಚ ಮಹಾರಥಃ ।
ಧೃಷ್ಟದ್ಯುಮ್ನೋ ವಿರಾಟಶ್ಚ
ಸಾತ್ಯಕಿಶ್ಚಾಪರಾಜಿತಃ ॥ 17

ದ್ರುಪದೋ ದ್ರೌಪದೇಯಾಶ್ಚ
ಸರ್ವಶಃ ಪೃಥಿವೀಪತೇ ।
ಸೌಭದ್ರಶ್ಚ ಮಹಾಬಾಹುಃ
ಶಂಖಾನ್ ದಧ್ಮುಃ ಪೃಥಕ್ಪೃಥಕ್ ॥ 18

ಹಿರಿಯ ಬಿಲ್ಲೋಜ ಕಾಶಿರಾಜ, ಮಹಾರಥನಾದ ಶಿಖಂಡಿ, ಧೃಷ್ಟದ್ಯುಮ್ನ, ವಿರಾಟ, ಸೋಲರಿಯದ ಸಾತ್ಯಕಿ, ದ್ರುಪದ, ದ್ರೌಪದಿಯ ಮಕ್ಕಳು, ಮಹಾಬಾಹುವಾದ ಅಭಿಮನ್ಯು– ಹೀಗೆ ಎಲ್ಲರೂ ತಮ್ಮ ತಮ್ಮ ಶಂಖಗಳನ್ನು ಊದಿದರು. ಓ ಧೃತರಾಷ್ಟ್ರ; ಕೇಳು.

ಸ ಘೋಷೋ ಧಾರ್ತರಾಷ್ಟ್ರಾಣಾಂ
ಹೃದಯಾನಿ ವ್ಯದಾರಯತ್ ।
ನಭಶ್ಚ ಪೃಥಿವೀಂ ಚೈವ
ತುಮುಲೋ ವ್ಯನುನಾದಯನ್ ॥ 19

ಆ ಗದ್ದಲವು ಭೂಮಿಯಲ್ಲಿಯೂ ಆಕಾಶದಲ್ಲಿಯೂ ತುಂಬಿ ಪ್ರತಿಧ್ವನಿಯನ್ನು ಹಬ್ಬಿಸಿ ಕೌರವರ ಎದೆ ಬಿರಿಯುವಂತೆ ಮಾಡಿತು.

ಅಥ ವ್ಯವಸ್ಥಿತಾನ್ ದೃಷ್ಟ್ವಾ
ಧಾರ್ತರಾಷ್ಟ್ರಾನ್ ಕಪಿಧ್ವಜಃ ।
ಪ್ರವೃತ್ತೇ ಶಸ್ತ್ರಸಂಪಾತೇ
ಧನುರುದ್ಯಮ್ಯ ಪಾಂಡವಃ ॥ 20

ಹೃಷೀಕೇಶಂ ತದಾ ವಾಕ್ಯಂ
ಇದಮಾಹ ಮಹೀಪತೇ !

ಓ ಧೃತರಾಷ್ಟ್ರ ಸಜ್ಜಾಗಿ ಎದುರಿಗೆ ನಿಂತಿರುವ ಕೌರವರನ್ನು ನೋಡಿ ಕಪಿಧ್ವಜನಾದ ಅರ್ಜುನನು ಹೊಡೆತಕ್ಕೆ ಮೊದಲು ಮಾಡಬೇಕಾದ ಆ ಸಮಯದಲ್ಲಿ ಗಾಂಡೀವವನ್ನು ಕೈಗೆ ತೆಗೆದುಕೊಂಡು, ಕೃಷ್ಣನನ್ನು ಕುರಿತು ಈ ಮಾತನ್ನು ಹೇಳಿದನು.

– ಸಶೇಷವು

( 8ನೇ ಪುಟದಿಂದ )

ವೈಶಿಷ್ಟ್ಯಕ್ಕಾಗಲೀ ಶಕ್ತಿಪ್ರದರ್ಶನಕ್ಕಾಗಲೀ ಅವಕಾಶವಿಲ್ಲ.

ಅಧ್ಯಾತ್ಮರಾಮಾಯಣದಲ್ಲಿ ಶ್ರೀರಾಮ ಪರತತ್ತ್ವ. ಧರೆಗೆ ಇಳಿದು ಬಂದ ಮಹಾವಿಷ್ಣು. ಸೀತೆಯಾದರೋ ಮಾಯೆ, ಆದಿಶಕ್ತಿ, ಅನಪಾಯಿನಿ ಎನಿಸಿದ ಮಹಾಲಕ್ಷ್ಮಿ. ಅಂತಹವಳನ್ನು ನೀಚನಾದ ರಾವಣನು ಮೋಹಿಸಲೂ ಬಾರದು ಅಪಹರಣಮಾಡುವುದಂತೂ ಊಹಿಸಲೂ ಆಗದ ಕೆಲಸ ಆದುದರಿಂದ ಅಧ್ಯಾತ್ಮರಾಮಾಯಣದಲ್ಲಿ ಸೀತೆಯಸ್ಥಾನದಲ್ಲಿ ಮಾಯಾಸೀತೆಯನ್ನು ನಿರ್ಮಿಸಿ ಕಥೆಯನ್ನು ಬೆಳೆಸಿದೆ. ಸ್ವರ್ಣಮೃಗ ಆಶ್ರಮದ ಬಳಿ ಸುಳಿಯುತ್ತಿರವಾಗಲೇ ಅದು ರಾವಣನ ವ್ಯಾಪಾರವೆಂದರಿತು ರಾಮನು ಸೀತೆಯನ್ನು ಏಕಾಂತದಲ್ಲಿ ಕರೆದು ಅವಳನ್ನು ಕುರಿತು 'ಸೀತೆ ಈಗ ರಾವಣನು ಭಿಕ್ಷುರೂಪದಲ್ಲಿ ನಿನ್ನನ್ನು ಅಪಹರಿಸಲು ಬರುವನು. ನೀನು ನಿನ್ನ ಆಕಾರದ ನೆರಳನ್ನು ಈ ಆಶ್ರಮದಲ್ಲಿರಿಸಿ ಅಗ್ನಿಪ್ರವೇಶಮಾಡಿ ಒಂದುವರ್ಷಕಾಲ ಅದೃಶ್ಯಳಾಗಿರು. ರಾವಣನ ಸಂಹಾರವಾದ ಬಳಿಕ ಪುನಃ ಬಂದು ಸೇರುವೆಯಂತೆ' ಎನ್ನುವನು. ಸೀತೆ ಹಾಗೆಯೇ ಮಾಡುವಳು. ಈ ರಾಮಾಯಣವನ್ನೇ ಅನುಸರಿಸಿರುವ 'ತುಳಸೀರಾಮಾಯಣ'ದಂತಹ ಇತರ ರಾಮಾಯಣಗಳೂ ಹೀಗೆಯೇ ಕಲ್ಪಿಸಿಕೊಂಡಿವೆ. ಲಕ್ಷ್ಮಣನಿಲ್ಲದಿರುವಾಗ ರಾಮನು ಸೀತೆಯನ್ನು ಕರೆದು 'ಪ್ರಿಯೆ, ಈಗ ನಾನು ಮನುಷ್ಯನಂತೆ ಆಟವನ್ನು ಕಟ್ಟುವೆನು. ಈ ಅವಧಿಯಲ್ಲಿ ನಾನು ರಾಕ್ಷಸರನ್ನು ಸಂಹಾರಮಾಡುವೆನು ನೀನು ಅಗ್ನಿಯಲ್ಲಿರು' ಎಂದು ಹೇಳುವನು. ಹಾಗೆಯೇ ಸೀತೆಯು ಛಾಯೆಯನ್ನಿಟ್ಟು, ಅಗ್ನಿ ಪ್ರವೇಶಮಾಡುವಳು. ಈ ಸನ್ನಿವೇಶದಲ್ಲಿ ಸೀತಾ ರಾಮದ ಪಾತ್ರಗಳಿಗೆ ಯಾವ ನೆಲೆ?

ಇನ್ನು ಸೀತೆಯ ವಿಷಯ ಆದಿಕಾವ್ಯದ ಸೀತೆ ಆದರ್ಶ ಮಹಿಳೆ. ಮೂರ್ತಿವೆತ್ತ ಪತಿವ್ರತಾ ಧರ್ಮ. ತನ್ನ ಧರ್ಮದ ಪೂರ್ಣ ಅರಿವುಳ್ಳವಳು. ಅದನ್ನು ಆಚರಿಸುವುದರಲ್ಲಿ ಎಷ್ಟು ಕಷ್ಟ ಬಂದರೂ ಅನುಭವಿಸುವುದಕ್ಕೆ ಸಿದ್ಧಳು. ಅವಳಿಗೆ ನಿಜವಾದ ಕಷ್ಟ ಪ್ರಾರಂಭವಾಗುವುದು ಅವಳನ್ನು ರಾವಣನು ಸಂಧಿಸಿದ ಮೇಲೆ. ಹೀಗಿರುವಾಗ ರಾವಣನು ಸಂಧಿಸಿದುದು, ಅಪಹಾರಮಾಡಿದುದು ಅವಳನ್ನಲ್ಲ. ಮಾಯಾಸೀತೆಯನ್ನು – ಛಾಯಾಸೀತೆಯನ್ನು, ರಾವಣನಿಂದ ಪರಿಭವಪಟ್ಟವಳೆಲ್ಲಾ ಛಾಯಾಸೀತೆಯೇ. ಮೂಲಸೀತೆಯ ವಿಷಯವಾಗಿ ವಾಚಕರಿಗೆ ಯಾವ ಆಸಕ್ತಿ? ಜನಕರಾಜನಂದಿನಿಯಾಗಿ, ಅಯೋನಿಜೆಯಾಗಿ ದಶರಥನ ಸೊಸೆಯಾಗಿ ರಾಮ ಮಹಿಷಿಯಾದವಳು. ನೀಚನಾದ ರಾವಣನಿಂದ ಅಪಹೃತಳಾಗಿ ಅವನ ವಿವಿಧ ಹಿಂಸೆಗೊಳಗಾಗಿ ಎಲ್ಲ ಕಷ್ಟ ಕಾಲದಲ್ಲಿಯೂ ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಂಡ ಆ ಧರ್ಮದೇವತೆಯಲ್ಲಿ ಎಂತಹ ವಾಚಕರಿಗೂ ಅನುಕಂಪವುಂಟಾಗುತ್ತದೆ. ಅದು ಬರಿಯ ನೆರಳೆಂದು ತಿಳಿದರೆ ಅದಕ್ಕೂ ವಾಚಕರಿಗೂ ಏನು ಸಂಬಂಧ? ಅಗ್ನಿಯಲ್ಲಿ ಒಂದುವರ್ಷ ಕಾಲ ಸುಖವಾಗಿದ್ದ ನಿಜವಾದ ಸೀತೆಯಲ್ಲಿ ಯಾರಿಗೆ ಮರುಕ!

ಸೀತಾದೇವಿಯನ್ನು ಅಗ್ನಿಯಲ್ಲಿರಿಸಿ ರಾವಣನಿಗೆ ಅವಳ ನೆರಳನ್ನು ಮಾತ್ರ ಪ್ರದರ್ಶಿಸುವ ಉಪಾಯವನ್ನು ಲಕ್ಷ್ಮಣನಿಗೂ ತಿಳಿಸಿದೆ ಅವನನ್ನು ಬುದ್ಧಿಪೂರ್ವಕವಾಗಿ ಮೋಸಗೊಳಿಸಿ ಅವನನ್ನು ದೂರದಲ್ಲಿ ಕಂಡಾಗ ಪ್ರಾಕೃತ ಮನುಷ್ಯನಂತೆ ಸೀತೆಗಾಗಿ ಚಿಂತಿಸುತ್ತಿರುವಂತೆ ಹಂಬಲಿಸುತ್ತಿರುತ್ತೇನೆ ಎಂದು ರಾಮನು ತನ್ನಲ್ಲಿಯೇ ತಾನು ಹೇಳಿಕೊಳ್ಳುತ್ತಾನೆ. ಇಂತಹ ರಾಮನಲ್ಲಿ ಗೌರವವುಂಟಾಗುವುದು ತಾನೆ ಹೇಗೆ? ಈ ನಟನೆಯನ್ನು ರಾಮನು ತಾನೆ ಹೇಗೆ ಸಮರ್ಥಿಸಿ ಕೊಳ್ಳುತ್ತಾನೆ.

ಸ್ವಲ್ಪ ಮಟ್ಟಿಗೆ ಅಧ್ಯಾತ್ಮರಾಮಾಯಣದಿಂದ ಪ್ರಭಾವಿತವಾಗಿರುವ ತಮಿಳಿನ ಕಂಬ ರಾಮಾಯಣದಲ್ಲಿ ರಾವಣನು ಸೀತೆಯನ್ನು ಪ್ರತ್ಯಕ್ಷ ಸ್ಪರ್ಶ ಮಾಡಬಾರದುದರಿಂದ ರಾವಣನು ಅವಳನ್ನು ಪರ್ಣಶಾಲೆ ಯೊಡನೆಯೇ ಕೊಂಡೊಯ್ಯುತ್ತಾನೆ. ಆದರೂ ರಾವಣನ ಮುಂದಿನ ನಡವಳಿಕೆಗಳಿಗೂ ಇದಕ್ಕೂ ಸಮಂಜಸವುಂಟಾಗುವುದಿಲ್ಲ.

ಅಧ್ಯಾತ್ಮರಾಮಾಯಣವನ್ನು ಪೂರ್ಣವಾಗಿ ಅನುಸರಿಸಿರುವ ಆನಂದ ರಾಮಾಯಣದಲ್ಲಿ ಸೀತೆಯ ಕಲ್ಪನೆ ಇನ್ನೂ ಮುಂದುವರೆದಿದೆ. ಶೂರ್ಪನಖಿಯ ಭಂಗವಾದ ಮೇಲೆ ರಾಮನು ಸೀತೆಯನ್ನು ಗುಟ್ಟಾಗಿ ಕರೆದು ಹೇಳುವನು – ಸೀತೆ ನೀನು ಮೂರು ಭಾಗವಾಗು. ನೀನು ರಜೋರೂಪದಲ್ಲಿ ಬೆಂಕಿಯಲ್ಲಿ ನೆಲಸು, ಸತ್ವರೂಪದಿಂದ ನನ್ನ ಎಡಭಾಗದಲ್ಲಿ ನೇರಿಕೋ, ತಮೋಮಯಿಯಾಗಿ ರಾವಣನ ಮೋಹನಾರ್ಥವಾಗಿ ಪಂಚವಟಿಯಲ್ಲಿ ನಿಲ್ಲು. ಸೀತೆಯು ಹಾಗೆಯೇ ಮಾಡುವಳು. ಕೊನೆಗೆ ರಾವಣವಧೆಯಾದ ಮೇಲೆ ಸೀತೆಯ ಅಗ್ನಿ ಪ್ರವೇಶ ಮಾಡುವಾಗ ಅಗ್ನಿಯು ಅವಳನ್ನು ಸುಡದೆ ತೊಡೆಯ ಮೇಲೆ ಕುಳ್ಳಿರಿಸಿ ಕೊಂಡಿರಲು, ರಜೋ ಸೀತೆ ಅಗ್ನಿಯಿಂದ ಹೊರಗೆ ಬಂದು ರಾಮನೊಡಲಿನಲ್ಲಿದ್ದ ಸತ್ವರೂಪಿಯಾದ ಸೀತೆಯೊಡನೆ ಸೇರಿ ಮೂವರೂ ಒಂದಾಗುವರು. ಇಂತಹ ಕಲ್ಪನೆಯಲ್ಲಿ ವಿಚಿತ್ರವಾಗಿ ಮೂಡಿ ವಾಚಕರಮೇಲೆ ಯಾವ ಪರಿಣಾಮವನ್ನು ಉಂಟುಮಾಡಲಾರವು.

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೆ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
**ತಿರುಪತಿ–517501**

ಆದಿಕವಿಯು ರಾಮಾಯಣದಲ್ಲಿ ಸುಖ ಜೀವನಕ್ಕೆ ಸಹಾಯಕವಾದ ಆದರ್ಶವ್ಯಕ್ತಿಗಳನ್ನು ಚಿತ್ರಿಸಿರುವಂತೆಯೇ ಸುಖ ಜೀವನಕ್ಕೆ ಮಾರಕರಾದ ತ್ಯಾಜ್ಯ ವ್ಯಕ್ತಿಗಳನ್ನು ಬಹು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಆ ದೃಷ್ಟಿಯಿಂದಲೇ ಕೈಕೇಯಿ, ಮಂಥರೆ, ರಾವಣ ಮುಂತಾದ ಪಾತ್ರಗಳನ್ನು ನಿರ್ಮಿಸಿರುವುದು. ಇಂತಹವರು ಆದರ್ಶವ್ಯಕ್ತಿಗಳಾಗಬಹುದಿದ್ದರೂ ತಮ್ಮ ನಡತೆಯಲ್ಲಿ ಜಾರಿದ್ದರಿಂದ ತಾವೇ ಅಲ್ಲದೆ ತಮ್ಮ ಪರಿಸರವನ್ನು ನಾಶಗೊಳಿಸಿದರು. ವಾಸ್ತವವಾಗಿ ಕೈಕೇಯಿ ಕೆಟ್ಟವಳಲ್ಲ. ರಾಮನಲ್ಲಿ ವಿಶೇಷ ಪ್ರೀತಿಯಿಂದಿದ್ದವಳು ರಾಮನ ಪಟ್ಟಾಭಿಷೇಕದ ಸುದ್ದಿಯನ್ನು ಕೇಳಿದಾಗ ಮಂಥರೆಗೆ ಆಭರಣದ ಮೆಚ್ಚನ್ನು ಕೊಡುವಳು. ಅವಳ ಮಾತಿನ ಪ್ರಭಾವಕ್ಕೆ ಒಳಗಾಗಿ ಹಟಮಾರಿಯಾಗಿ, ಚಕ್ರವರ್ತಿಯಾದ ದಶರಥ ಅವಳ ಕಾಲಿಗೆ ಬಿದ್ದರೂ ಲಕ್ಷಿಸದೆ ದಶರಥನ ಮರಣಕ್ಕೂ, ರಾಮನ ವನವಾಸಕ್ಕೂ ಭರತನ ಅಪಾರವಾದ ದುಃಖಕ್ಕೂ ತನ್ನ ಶಾಶ್ವತವಾದ ಅಪಯಶಸ್ಸಿಗೂ ಕಾರಣಳಾಗುವಳು. ರಾವಣನ ಅದ್ಭುತವಾದ ಪರಾಕ್ರಮವೂ ಅಸೀಮವಾದ ಐಶ್ವರ್ಯವೂ, ಜ್ಞಾನ ವೈಶಾಲ್ಯವೂ ಅವನನ್ನು ಆದರ್ಶ ವ್ಯಕ್ತಿಯಾಗಿ ಮಾಡಬಹುದಾಗಿದ್ದರೂ ಅವನ ಇಂದ್ರಿಯ ಚಾಪಲ್ಯವು ಅವನನ್ನು ದುರಂತ ವ್ಯಕ್ತಿಯನ್ನಾಗಿ ಮಾಡಿತು. ಅಲ್ಲದೆ ಅವನ ಸಂಪೂರ್ಣನಾಶಕ್ಕೆ ಕಾರಣವಾಯಿತು. ಇಂತಹ ವಿಷಯದಲ್ಲಿ ಎಚ್ಚರವಾಗಿರಬೇಕೆಂದು ತಿಳಿಸುವುದಕ್ಕಾಗಿಯೇ ವಾಲ್ಮೀಕಿಯು ಕೈಕೇಯಿ ಮಂಥರೆಯರ ಪ್ರಸಂಗಕ್ಕೆ ಎಂಟು ಸರ್ಗಗಳನ್ನು ರಾವಣ ಪ್ರಸಂಗಕ್ಕೆ ಕಾಂಡಗಳನ್ನೇ ಮೀಸಲಾಗಿಸಿರುವುದು.

ಈ ಎರಡು ಸಂದರ್ಭಗಳಲ್ಲೂ ಅಧ್ಯಾತ್ಮ ರಾಮಾಯಣವು ಮೂಲದ ಸ್ವಾರಸ್ಯವನ್ನು ಗ್ರಹಿಸದೆ ಬಹು ಪೇಲವನನ್ನಾಗಿ ಮಾಡಿಬಿಟ್ಟಿದೆ.

ಅಧ್ಯಾತ್ಮ ರಾಮಾಯಣದಲ್ಲಿ ಕೈಕೇಯಿ ಮಂಥರೆಯರಿಗೆ ಯಾವ ಜವಾಬ್ದಾರಿಯನ್ನು ಹೊರಿಸಿಲ್ಲ. ದೇವತೆಗಳ ಆದೇಶದಂತೆ ಸರಸ್ವತಿಯು ಬಂದು ರಾಮಪಟ್ಟಾಭಿಷೇಕಕ್ಕೆ ವಿಘ್ನವನ್ನುಂಟು ಮಾಡುವಂತೆ ಕೈಕೇಯಿ ಮತ್ತು ಮಂಥರೆಗೆ ಪ್ರೇರೇಪಿಸುವುದರಿಂದ ಅವರು ಹಾಗೆ ಮಾಡಿದರು ಎಂದು ಕೆಲವೇ ಶ್ಲೋಕಗಳಲ್ಲಿ ಸೂಚಿಸಿ ಆ ಪಾತ್ರಗಳ ಔಚಿತ್ಯವನ್ನೇ ತುಂಡು ಮಾಡಿದೆ.

ರಾವಣನ ಪಾತ್ರವೂ ಹಾಗೆಯೇ ಆಗಿದೆ. ವಾಲ್ಮೀಕಿಯು ರಾವಣನ ಪಾತ್ರವನ್ನು ಬಹು ಉದಾರವಾಗಿ ವರ್ಣಿಸಿದ್ದಾರೆ. ಅವನ ವೇಶ, ಕೋಶ, ವೈಭವ ಅನುಪಮ ಪೌರುಷ, ಸೌಂದರ್ಯ ಪರಾಕ್ರಮ– ಮೊದಲಾದುವನ್ನು ಭಿನ್ನ ಭಿನ್ನ ವ್ಯಕ್ತಿಗಳ ಮೂಲಕ ತಿಳಿಯಪಡಿಸಿ ಅವನು ಜಿತೇಂದ್ರಿಯನಲ್ಲದಿದ್ದುದು ಇವೆಲ್ಲವೂ ನಿಷ್ಪ್ರಯೋಜನವಾಗುವ ಹಾಗೆ ಮಾಡಿತು. ಆದುದರಿಂದ ರಾವಣನಂತಾಗಬಾರದು ಎಂಬುದನ್ನು ಕವಿಯು ಸ್ಪಷ್ಟಪಡಿಸಿದ್ದಾರೆ. ಅಧ್ಯಾತ್ಮರಾಮಾಯಣದಲ್ಲಿ ಈ ದೃಷ್ಟಿ ವ್ಯತ್ಯಾಸವಾಗಿ ರಾವಣನೂ ಅಂತರ್ಯವಾಗಿ ರಾಮ ಭಕ್ತನೇ ಆಗಿದ್ದನೆಂದು ವರ್ಣಿಸಿರುವುದು ವಿರೋಧಾಭಾಸವಾಗುತ್ತದೆ.

ಭಾರತೀಯ ದೇಶಭಾಷೆಗಳಲ್ಲಿ ರಾಮಾಯಣ ರಚನೆಯಾಗತೊಡಗಿದುದು 9 ನೇ ಶತಕದಿಂದ ಈಚೆಗೆ. ಅವುಗಳಲ್ಲಿ ತಮಿಳಿನಲ್ಲಿ ರಚನೆಯಾದ ಕಂಬ ರಾಮಾಯಣವೇ ಮೊದಲನೆಯದು. ನಂತರ ಕನ್ನಡದಲ್ಲಿ ಬಂದ ರಾಮಾಯಣದಲ್ಲಿ ಮೊದಲಿನವು ಬಹುತೇಕ ಜೈನ ಸಂಪ್ರದಾಯವನ್ನು ಅನುಸರಿಸಿ ಹೊರಬಂದವು. ಮಧ್ಯಕಾಲೀನ ತೊರವೆಯ ನರಹರಿಯ ಆಗಮನದಿಂದ ವಾಲ್ಮೀಕಿ ರಾಮಾಯಣದ ಅನುಸರಣೆ ಆಯಿತು. ತೆಲುಗು ಮಲೆಯಾಳ ಔತ್ತರೇಯ ಭಾಷೆಗಳ ರಾಮಾಯಣಗಳು ಬಹುತೇಕ ಅಧ್ಯಾತ್ಮ ರಾಮಾಯಣದಿಂದ ಪ್ರಭಾವಿತವಾಗಿವೆ. ಕೃತ್ತಿವಾಸ, ತುಲಸೀದಾಸರುಗಳು ಔತ್ತರೇಯ ರಾಮಾಯಣ ಕರ್ತೃಗಳಲ್ಲಿ ಗಮನಾರ್ಹರು. ಈ ದೇಶೀಯ ಭಾಷೆಗಳಲ್ಲಿನ ರಾಮಾಯಣದ ಕಥೆ ಮತ್ತೊಂದು ಪ್ರತ್ಯೇಕ ಲೇಖನಕ್ಕೆ ವಸ್ತುವಾಗುವಂತಹುದು.

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಸಹಕಾರ ಸಂಸ್ಥೆಯ ನಿರ್ದೇಶಕ ಮಂಡಳಿಗೆ ತಿ. ತಿ ದೇ. ಆಡಳಿತ ನಿರ್ವಾಹಕ ಮಂಡಳಿಯ ಪರವಾಗಿ ಶ್ರೀಮತಿ ಕೆ. ಪ್ರಭಾವತಮ್ಮ ಅವರ ಸ್ಥಾನದಲ್ಲಿ ಶ್ರೀಮತಿ ಎಸ್. ರಾಜಕುಮಾರಿ ಅವರನ್ನು ನಾಮಕರಣ ಮಾಡಲು ತೀರ್ಮಾನಿಸಲಾಯಿತು.

*  *  *  *

ಶ್ರೀವೆಂಕಟೇಶ್ವರ ಶಿಲ್ಪ ಶಿಕ್ಷಣ ಕೇಂದ್ರದಲ್ಲಿ ಶಿಕ್ಷಣ ಪೂರ್ತಿ ಮಾಡಿದ ವಿದ್ಯಾರ್ಥಿಗಳಿಗೆ, ಶಿಕ್ಷಣ ಶಿಲ್ಪಿಗಳನ್ನಾಗಿ ತಿಂಗಳಿಗೆ 200 ರೂಗಳ ಸ್ಥಿರ ವೇತನದೊಡನೆ ಶಿಲ್ಪ ಕೇಂದ್ರದಲ್ಲೇ 2ವರ್ಷಗಳ ಉದ್ಯೋಗ ನೀಡಲು ತೀರ್ಮಾನಿಸಲಾಯಿತು.

*  *  *  *

ತಿರುಮಲೆ ತಿರುಪತಿ ದೇವಸ್ಥಾನಗಳ ದತ್ತ ಗ್ರಾಮ ತಾಳ್ಲಪಾಕದಲ್ಲಿನ ತಿ. ತಿ. ದೇ. ಪ್ರಾಥಮಿಕ ಪಾಠಶಾಲೆಯ ಹೊಸಭವನವನ್ನು ತಿಂಗಳಿಗೆ 100 ರೂಗಳ ನಾಮಮಾತ್ರ ಬಾಡಿಗೆಯಲ್ಲಿ ಕಡಪ ಜಿಲ್ಲಾ ಪರಿಷತ್ ಕಾರ್ಯದರ್ಶಿಗೆ ಪಾಠಶಾಲೆಗಾಗಿ 30 ವರ್ಷಗಳ ಕಾಲ ಲೀಸ್‌ಗೆ ನೀಡಲು ತೀರ್ಮಾನಿಸಲಾಯಿತು.

*  *  *  *

ತಿರುಮಲೆ – ತಿರುಪತಿ ದೇವಸ್ಥಾನಗಳ ಆಲಯಗಳಲ್ಲಿ ಕೆಲಸ ಮಾಡುತ್ತಿರುವ ನಾದಸ್ವರ, ಡೋಲು ವಾದ್ಯಕಾರರಿಗೆ ಲೋಯರ್ ಡಿವಿಷನ್ ಗುಮಾಸ್ತರ ವೇತನ ( ರೂ 425–650 ) ವನ್ನು ನೀಡಲು ತೀರ್ಮಾನಿಸಲಾಯಿತು.

*  *  *  *

ತಿರುಮಲೆಯ ಶ್ರೀವೆಂಕಟೇಶ್ವರ ನಿತ್ಯದಿತ್ತದಲ್ಲಿ ಯಾತ್ರಿಕರಿಗೆ ವಿತರಣೆ ಮಾಡುವ ಅನ್ನಪ್ರಸಾದಗಳನ್ನು ಶನಿವಾರ ಭಾನುವಾರಗಳಲ್ಲಿ ಹೆಚ್ಚಿಸಲು ತೀರ್ಮಾನಿಸಲಾಯಿತು.

ಕದಂಬ (ಉದಯ ಮೊದಲ ಗಂಟೆಯ ನಂತರ)
ಎರಡು ಸೋಲಗಳು

ದಧ್ಯೋದನ ( ಎರಡನೇ ಗಂಟೆಯ ನಂತರ )
ಎರಡು ಸೋಲಗಳು

ಕದಂಬ (ರಾತ್ರಿ ಗಂಟೆಯ ನಂತರ)
ಎರಡು ಸೋಲಗಳು

*  *  *  *

ಹರಿದ್ವಾರದ ಭದ್ರಕಾಳೀ ಪೀಠವನ್ನು ಆ ಪೀಠಾಧಿಪತಿ ಶ್ರೀಶ್ರೀ ಕಲ್ಯಾಣಾನಂದ ತೀರ್ಥಸ್ವಾಮೀಜಿ ಅವರ ಬೇಡಿಕೆಯಂತೆ ಯಾವ ಶರತ್ತುಗಳೂ ಇಲ್ಲದೆ ತಿ. ತಿ. ದೇ. ವಶಕ್ಕೆ ತೆಗೆದುಕೊಳ್ಳಲು ತೀರ್ಮಾನಿಸಲಾಯಿತು.

*  *  *  *

ಯಾತ್ರಿಕ ಸೌಕರ್ಯಗಳಿಗಾಗಿ ವೆಚ್ಚಮಾಡಲು ತಿರುಚಾನೂರು ಗ್ರಾಮಪಂಚಾಯತಿಗೆ 1981–82, 1982–83 ವರ್ಷಗಳಿಗಾಗಿ ರೂ 50,000–00 ಮಂಜೂರು ಮಾಡಲಾಯಿತು.

*  *  *  *

1983 ಜನವರಿಯಲ್ಲಿ ಆದ ಆಂಧ್ರಪ್ರದೇಶದ ಶಾಸನ ಪಕ್ಷದ ಬದಲಾವಣೆಯಿಂದ ತಿ ತಿ. ದೇ. ಬೋರ್ಡ್‌ನಲ್ಲಿ ತೆರವಾದ ಮೂರು ಸ್ಥಳಗಳಿಗೆ ಪ್ರಸ್ತುತ ಶಾಸನಸಭಾ ಸದಸ್ಯರಾದ ಶ್ರೀಮತಿ ಎಸ್. ರಾಜಕುಮಾರಿ, ಶ್ರೀ ತಲಾರಿ ರುದ್ರಯ್ಯ, ಶ್ರೀ ಗುರ್ರಂ ಮಾಧವರೆಡ್ಡಿ ಅವರುಗಳನ್ನೂ, ತಿ. ತಿ. ದೇ. ಆಡಳಿತ ನಿರ್ವಾಹಕ ಮಂಡಳಿಗೆ ಶ್ರೀಮತಿ ಎಸ್. ರಾಜಕುಮಾರಿಯವರನ್ನು ಆಂಧ್ರಪ್ರದೇಶ್ ಗೌರ್ನರ್ ಅವರು ನಾಮಕರಣ ಮಾಡಿದ್ದಾರೆ.

*  *  *  *

ತಿರುಪತಿಯ ರೇಣಿಗುಂಟ ಕಡೆಯ ರೈಲ್ವೆ ಓವರ್ ಬ್ರಿಡ್ಜ್‌ನಿಂದ ಕಪಿಲತೀರ್ಥದವರೆಗಿನ ಬೈಪಾಸ್ ರಸ್ತೆಯ ಮಿಕ್ಕ ಕೆಲಸವನ್ನು ತಿ. ತಿ. ದೇ. ಇಂಜನೀಯರಿಂಗ್ ಶಾಖೆ ಕೈಗೆತ್ತಿಕೊಂಡು ಶೀಘ್ರದಲ್ಲಿ ಪೂರ್ಣಗೊಳಿಸಲು ತೀರ್ಮಾನಿಸಲಾಯಿತು.

*  *  *  *

ತಿರುಮಲೆ ತಿರುಪತಿ ದೇವಸ್ಥಾನದ ಉದ್ಯೋಗಿಗಳಿಗಾಗಿ ತಿರುಪತಿಯ ವಿನಾಯಕ ನಗರ್, ಗೋವಿಂದರಾಜ ನಗರ್ ಪ್ರಾಂತ್ಯಗಳಲ್ಲಿ ರೂ 54.74 ಲಕ್ಷ ವೆಚ್ಚದಲ್ಲಿ ಹೆಚ್ಚಿನ ವಸತಿ ಸೌಕರ್ಯ ಉಂಟುಮಾಡಬೇಕೆಂದು ತೀರ್ಮಾನಿಸಲಾಯಿತು.

★

# ನೇತ್ರ ಚಿಕಿತ್ಸಾ ಶಿಬಿರ

## ವಾರ್ತಾಲಹರಿ

### ಅಂಗವಿಕಲರಿಗಾಗಿ ಶಿಕ್ಷಣ ತರಬೇತಿ ಕೇಂದ್ರ - ಉಗಾದಿಯಿಂದ ಆರಂಭ

ಅಂಗವಿಕಲರಿಗಾಗಿ ಶಿಕ್ಷಣ – ತರಬೇತಿ ಕೇಂದ್ರ ವೊಂದನ್ನು ತಿ. ತಿ. ದೇಗಳ ವತಿಯಿಂದ ಉಗಾದಿ ಯಂದು (ಏಪ್ರಿಲ್–14) ಆರಂಭಿಸುವುದಾಗಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿ ರೆಡ್ಡಿ ಅವರು ತಿಳಿಸಿದರು.

ತಿ. ತಿ. ದೇ. ಗಳು ಏರ್ಪಡಿಸಿದ್ದ ಉಚಿತ ನೇತ್ರ ಶಸ್ತ್ರ ಚಿಕಿತ್ಸಾ ಶಿಬಿರದ ಉದ್ಘಾಟನೆಯ ಅಧ್ಯಕ್ಷತೆ ವಹಿಸಿ ಮಾತನಾಡುತ್ತಿದ್ದ ಶ್ರೀಯುತರು 'ಅಂಧ ತ್ವವು ಆರೋಗ್ಯ ಹಾಗೂ ಸಾಮಾಜಿಕ ಆರ್ಥಿಕ ಸಮಸ್ಯೆ'ಯೆಂದು. ತಿಳಿಸುತ್ತ 'ತಿ. ತಿ. ದೇಗಳು ನೇತ್ರ ಚಿಕಿತ್ಸಾ ಶಿಬಿರಗಳನ್ನು ನಡೆಸುವಲ್ಲಿ ಎಂದೆಂದೂ ಸಹಕರಿಸುತ್ತದೆ' ಎಂದು ಹೇಳಿ ಮೇಲಿನಂತೆ ಘೋಷಿಸಿದರು.

ಉಚಿತ ನೇತ್ರ ಚಿಕಿತ್ಸಾ ಶಿಬಿರದ ನೇತೃತ್ವ ವಹಿಸಿದ್ದ ಹೈದರಾಬಾದಿನ ಸರೋಜಿನಿ ಕಣ್ಣಿನ ಆಸ್ಪತ್ರೆಯ ಡಾ॥ ಪಿ. ಶಿವಾರೆಡ್ಡಿ ಅವರು ಮಾತ ನಾಡುತ್ತ 'ತಿ. ತಿ. ದೇ. ಒಂದು ಸ್ಥಾಯಿ ನೇತ್ರ ಚಿಕಿತ್ಸಾ ಕೇಂದ್ರವನ್ನು ಸ್ಥಾಪಿಸಬೇಕೆಂದು' ಕರೆ ನೀಡಿ, ಇಂಡಿಯಾದಂತಹ ಹಿರಿಯ ಜನ ಸಂಖ್ಯೆಯ ದೇಶದಲ್ಲೂ ನಾಲ್ಕೇ ಸಾವಿರ ಜನ ನೇತ್ರ ಚಿಕಿತ್ಸಕ ವೈದ್ಯರಿದ್ದು ನೇತ್ರ ಪರಿಶುದ್ಧತೆಯ ಬಗೆಗಿನ ಸಾಮಾನ್ಯಜ್ಞಾನದ ಪ್ರಸಾರ ಕಡಿಮೆ ಯಾಗಿದೆಯೆಂದು. ಹೀಗಾಗಿ ಭಾರತದಲ್ಲಿ ಸುಮಾರು 60 ಲಕ್ಷ ಜನ ಅಂಧರಿದ್ದಾರೆಂದೂ ಅವರು ತಿಳಿಸಿದರು.

ತಿ. ತಿ. ದೇ. ಪೌರಸಂಬಂಧ ಶಾಖಾಧಿಕಾರಿ ಶ್ರೀ ರಾವುಲ ಸೂರ್ಯ ನಾರಾಯಣಮೂರ್ತಿ ಅವರು ತಿ. ತಿ. ದೇ. ಕೈಗೊಂಡ ಜನೋಪಯೋಗಿ ಅಭಿವೃದ್ಧಿ ಪರ ಕಾರ್ಯಗಳ ವಿವರ ನೀಡಿದರು. ಶಿಬಿರದ ಬಗ್ಗೆ ವರದಿ ನೀಡಿದ ಶಿಬಿರಾಧಿಕಾರಿ ಡಾ॥ ವೈ. ಆರ್. ಧನಲಕ್ಷ್ಮಿ ಅವರು ಸುಮಾರು 4300 ಜನರು ನೇತ್ರ ಪರೀಕ್ಷೆ ಹಾಗೂ ಚಿಕಿತ್ಸೆ ಗೊಳಗಾಗಿ, ಅವರಲ್ಲಿನ 355 ಮಂದಿಗೆ ಶಸ್ತ್ರ ಚಿಕಿತ್ಸೆ ಮಾಡಲಾಗುವುದೆಂದರು. ಸ್ವಾಗತಾಧಿ ಆದಿನಾರಾಯಣ ಅವರು ವಂದನಾರ್ಪಣೆ ಮಾಡಿ ದರು.

ನೇತ್ರ ಚಿಕಿತ್ಸಾ ಶಿಬಿರದ ಎರಡು ದೃಶ್ಯಗಳು
ಮೇಲಿನ ಚಿತ್ರದಲ್ಲಿ ಮಾತನಾಡುತ್ತಿರುವರು ಡಾ॥ ಪಿ. ಶಿವಾರೆಡ್ಡಿ
ಕೆಳಗಣ ಚಿತ್ರದಲ್ಲಿ ಮಾತನಾಡುತ್ತಿರುವವರು ಶ್ರೀ ಡಿ ಸುಬ್ಬರಾಯಲು




### ಶಿಬಿರ ಮುಕ್ತಾಯ

ಮಾರ್ಚ್ ತಿಂಗಳ ಮೊದಲವಾರದಲ್ಲಿ ತಿ. ತಿ. ದೇ. ವತಿಯಿಂದ ನಡೆಸಲ್ಪಟ್ಟ ಉಚಿತ ನೇತ್ರ ಚಿಕಿತ್ಸಾ ಶಿಬಿರವು ಯಶಸ್ವಿಯಾಗಿ ಮುಕ್ತಾಯ ಹೊಂದಿತು. ಶಿಬಿರದ ಮುಕ್ತಾಯ ಸಮಾರಂಭದ ಅಧ್ಯಕ್ಷತೆಯನ್ನು ತಿ. ತಿ. ದೇ. ಸಹಕಾರ್ಯ ನಿರ್ವಹಣಾಧಿಕಾರಿ ಶ್ರೀ ಡಿ. ಸುಬ್ಬ ರಾಯುಲು ಅವರು ವಹಿಸಿದ್ದರು.

ಅಧ್ಯಕ್ಷ ಪೀಠದಿಂದ ಮಾತನಾಡುತ್ತ ಶ್ರೀಯು ತರು ಪೊರೆಯು ಮೂಲಕ ಉಂಟಾಗುವ ಕುರುಡು ತನವನ್ನು ಸುಲಭ ವೆಚ್ಚದಿಂದಾಗುವ ಶಸ್ತ್ರ ಚಿಕಿ ತ್ಸೆಯ ಮೂಲಕ ನಿವಾರಣೆ ಮಾಡುವ ವಿಧಾನ ವನ್ನು ವ್ಯಾಪಕವಾಗಿ ಕೈಗೊಳ್ಳುವ ಅಗತ್ಯವನ್ನು ಅವಧಾರಿಸಿ, ಅಂತರ ರಾಷ್ಟ್ರೀಯ ಖ್ಯಾತಿ ಪಡೆದ ಡಾ॥ ಪಿ. ಶಿವಾರೆಡ್ಡಿ ಹಾಗೂ ಅವರ ತಜ್ಞ ವೃಂದದ ಉತ್ತಮ ಸೇವೆಯನ್ನು ಈ ನೇತ್ರ ಚಿಕಿತ್ಸಾ ಶಿಬಿರದ ಸಂದರ್ಭದಲ್ಲಿ ಶ್ಲಾಘಿಸಿದರು

ಈ ಸಂದರ್ಭದಲ್ಲಿ ಮಾತನಾಡಿದ ಶಿಬಿರಾಧಿ ಕಾರಿ ಶ್ರೀ ನವಾಜ್‌ಖಾನ್ ಅವರು ಕಣ್ಣಿನ ಪೊರೆ ಯನ್ನು ಶಸ್ತ್ರ ಚಿಕಿತ್ಸೆಯ ಮೂಲಕ ತೆಗೆದು, ಸೂಕ್ತ ಕನ್ನಡಕವನ್ನುಪಯೋಗಿಸುವುದರಿಂದ ನೋಟವನ್ನು ಪರಿಪೂರ್ಣವಾಗಿ ಪಡೆಯ ಬಹು ದೆಂದು ತಿಳಿಸಿ, ಈ ಶಿಬಿರದಲ್ಲಿ 4300 ಮಂದಿ ಯನ್ನು ಪರೀಕ್ಷಿಸಿ 355 ಮಂದಿಗೆ ಶಸ್ತ್ರ ಚಿಕಿತ್ಸೆ ಮಾಡಲಾಯಿತು ಎಂದರು.

ಪೌರಸಂಬಂಧಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿಯವರು ಮಾತ ನಾಡುತ್ತ ಅಂಧತ್ವ ನಿವಾರಣೆಗಾಗಿ ತಿ. ತಿ. ದೇ. ಗಳು ಕೈಗೊಂಡ ಕ್ರಮಗಳನ್ನು ವಿವರಿಸಿದರು.

ಆಂಧ್ರಪ್ರದೇಶದ ಡೈರೆಕ್ಟರ್ ಜನರಲ್ ಆಫ್ ಪೋಲೀಸ್ ಶ್ರೀ ಎಸ್ ಆನಂದ ರಾವ್ ಅವರ ಪತ್ನಿ ಶ್ರೀಮತಿ ವಿಮಲ ಆನಂದರಾವ್ ಅವರು ಶಸ್ತ್ರ ಚಿಕಿತ್ಸೆ ಹೊಂದಿದವರಿಗೆ ಕನ್ನಡಕಗಳನ್ನೂ, ವೈದ್ಯ ವೃಂದಕ್ಕೆ ಮೊಮೆಂಟೋಗಳನ್ನೂ ನೀಡಿದರು. ಈ ಮೊದಲು ಶ್ರೀ ವೆಂಕಟೇಶ್ವರ ಯೂನಿವರ್ಸಿಟಿಯ ಮಹಿಳಾ ಸಂಘದ ಪರಿಯಿಂದ ಅದರ ಕಾರ್ಯದರ್ಶಿ ಶ್ರೀಮತಿ ಎಂ. ವಿಜಯಲಕ್ಷ್ಮಿ ಅವರು ಕನ್ನಡಕಗಳನ್ನು ತಿ. ತಿ. ದೇ. ಗಳಿಗೆ ಸಮರ್ಪಿಸಿದರು. ಸ್ವಾಗತಾಧಿಕಾರಿ ಶ್ರೀ ಆದಿನಾರಾಯಣ ಅವರು ವಂದನಾರ್ಪಣೆ ಮಾಡಿದರು.



ಶಸ್ತ್ರಚಿಕಿತ್ಸೆ ಹೊಂದಿದವರಿಗೆ ಕನ್ನಡಕಗಳನ್ನು ವಿತರಣೆಮಾಡುತ್ತ ಶ್ರೀಮತಿ ವಿಮಲಾ ಆನಂದರಾವ್

## ಎದುರು ಆಂಜನೇಯಸ್ವಾಮಿ ದೇವಾಲಯ ಸಂಪ್ರೋಕ್ಷಣೆ

ತಿರುಮಲೆಯ ಸ್ವಾಮಿಪುಷ್ಕರಿಣಿಯ ಬದಿಯಲ್ಲಿ ಶ್ರೀವರಾಹಸ್ವಾಮಿ ದೇವಾಲಯದ ಎದುರಿಗಿರುವ ಶ್ರೀ ಎದುರು ಆಂಜನೇಯಸ್ವಾಮಿ ದೇವಾಲಯದಲ್ಲಿ ಮಹಾಸಂಪ್ರೋಕ್ಷಣೆಯು ಮಾರ್ಚ್ 12 ರಿಂದ ಐದು ದಿನಗಳಕಾಲ ವೈದಿಕ ಪರಂಪರೆಗೆ ಅನುಸಾರವಾಗಿ ಸಂಭ್ರಮ, ಸಂತಸಗಳಿಂದ ನಡೆಯಿತು. ತಿ. ತಿ. ದೇ. ಆಸ್ಥಾನ ವಿದ್ವಾಂಸ ಶ್ರೀ ಪಂಡಿತ ವೇದಾಂತಂ ಜಗನ್ನಾಥಚಾರ್ಯರ ಲಗ್ನ ನಿಷ್ಕರ್ಷೆಯಿಂದ ಪಡೆದ ಈ ಮಹಾಸಂಪ್ರೋಕ್ಷಣೆಯಲ್ಲಿ ಅಸಂಖ್ಯಾತ ಭಕ್ತರು ಭಾಗವಹಿಸಿದ್ದರು

## ಶ್ರೀ ವೆಂಕಟೇಶ್ವರಸ್ವಾಮಿ ಪ್ಲವೋತ್ಸವ

ತಿರುಮಲೆಯ ಶ್ರೀವೆಂಕಟೇಶ್ವರ ಸ್ವಾಮಿಯ ವಾರ್ಷಿಕ ಪ್ಲವೋತ್ಸವವು ಇದೇ ಮಾರ್ಚ್ 24 ರಿಂದ ಮಾರ್ಚ್ 28 ರವರೆಗೆ ಸ್ವಾಮಿ ಪುಷ್ಕರಿಣಿಯಲ್ಲಿ ವೈಭವ ವಿಜೃಂಭಣೆಗಳಿಂದ ನಡೆಯಿತು ಅಸಂಖ್ಯ ಭಕ್ತಜನರು, ಈ ಎಲ್ಲ ದಿನಗಳಲ್ಲೂ ಸ್ವಾಮಿಯವರು ಶ್ರೀಭೂದೇವಿಯರು ತಂಪಾದ ಹವೆಯಲ್ಲಿ ಜಗಜಗಿಸುವ ವಿದ್ಯುದ್ದೀಪಗಳ ನಡುವೆ ವಿಹಾರಯಾತ್ರೆ ಮಾಡಿದ್ದನ್ನು ಕಂಡು ಆನಂದ ಪಡೆದರು.

## ಸಂಕ್ಷಿಪ್ತ ಸಮಾಚಾರ ದರ್ಶಿನಿ

ಅನ್ನಮಾಚಾರ್ಯ ವಾಙ್ಮಯ ಪರಿಶೋಧನೆಯ ವಿಶೇಷಾಧಿಕಾರಿ ಶ್ರೀ ರಾಮ ಸುಬ್ಬ ಶರ್ಮ ಅವರನ್ನು ಪುನರ್ನೇಮಕ ಮಾಡಲಾಯಿತು. 1982 ರ ಅಕ್ಟೋಬರ್ ತಿಂಗಳಿನಲ್ಲಿ ನಿವೃತ್ತರಾದ ಶ್ರೀ ಶರ್ಮ ಅವರು ಮತ್ತೆ ಎರಡು ವರ್ಷಗಳಕಾಲ ತಮ್ಮ ಪದವಿಯಲ್ಲಿ ಮುಂದುವರೆಯುವರು.

× × ×

ವಿವಿಧ ದೇವಾಲಯಗಳಿಗೆ ಅರ್ಧಬೆಲೆಯ ಸಬ್ಸಿಡಿಯಲ್ಲಿ ನೀಡುವ ಪ್ರತಿಮೆ ವಿಗ್ರಹಗಳ ಸಾಗಾಣಿಕೆ ವೆಚ್ಚದಲ್ಲೂ ಅರ್ಧಭಾಗವನ್ನು ತಿ. ತಿ. ದೇ. ಭರಿಸುವುದೆಂದು ತಿ. ತಿ. ದೇ. ಈಚೆಗೆ ತೀರ್ಮಾನಿಸಿದೆ.

× × ×

ಯಾತ್ರಿಕರೂ ಹಾಗೂ ತಿ. ತಿ. ದೇ. ಉದ್ಯೋಗಿಗಳಿಗೆ ಸಾಕಷ್ಟು ವೈದ್ಯ ಸದುಪಾಯಗಳನ್ನು ಕಲ್ಪಿಸಲು ತಿರುಮಲೆಯ ಅಶ್ವಿನಿ ಆಸ್ಪತ್ರೆಯಲ್ಲಿ ಒಬ್ಬ ಮೆಡಿಕಲ್ ಆಫೀಸರ್ ಅನ್ನೂ ತಿರುಮಲೆಯ ಕೇಂದ್ರ ವೈದ್ಯಶಾಲೆಯಲ್ಲಿ ಇಬ್ಬರು ಮೆಡಿಕಲ್ ಆಫೀಸರ್‌ಗಳನ್ನೂ ತಿ. ತಿ. ದೇ. ನೇಮಕ ಮಾಡುತ್ತದೆ

× × ×

ತಿರುಮಲೆಯಲ್ಲಿ ಪ್ರತಿಮಂಗಳವಾರವೂ ನಡೆಯುವ ಆರ್ಜಿತ ತೆಪ್ಪೋತ್ಸವವನ್ನು ಹಲವು ಸಾಂಕೇತಿಕ ಕಾರಣಗಳಿಂದ ರದ್ದು ಮಾಡಲಾಗಿದೆ. ವಾರ್ಷಿಕ ತೆಪ್ಪೋತ್ಸವ ಮಾತ್ರ ಯಥಾಪ್ರಕಾರ ನಡೆಯುತ್ತದೆ

× × ×

ಏಕಾಂತ ಸೇವೆಗೆ ಪ್ರತ್ಯೇಕ ಟಿಕೆಟ್‌ಗಳನ್ನು ಪ್ರವೇಶಗೊಳಿಸಿರುವುದರಿಂದ ಪ್ರಸ್ತುತ ಶ್ರೀವೆಂಕಟೇಶ್ವರ ಸ್ವಾಮಿ ದೇವಾಲಯದಲ್ಲಿ ಏಕಾಂತ ಸೇವೆಯನ್ನು ರಾತ್ರಿ 12–30ಕ್ಕೆ ಬದಲು ರಾತ್ರಿ 10–30ಕ್ಕೆ ಬದಲಾಯಿಸಲಾಗಿದೆ.

× × ×

ತಿರುಮಲೆ – ತಿರುಪತಿ ದೇವಸ್ಥಾನಗಳ ವಿದ್ಯಾಲಯ ಪ್ರಾಂಗಣ, ಆಟದ ಮೈದಾನಗಳನ್ನು ರಾಜಕೀಯ ಸಂಬಂಧ ಪಟ್ಟ ಪಕ್ಷಗಳ ಹೊರತು ಮಿಕ್ಕ ಪ್ರಜಾ ಕ್ಷೇಮ ಸಂಸ್ಥೆಗಳಿಗೆ ತಮ್ಮ ಸಾಮಾಜಿಕ, ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ನೀಡಲು ತಿ ತಿ. ದೇ ತೀರ್ಮಾನಿಸಿದೆ.

## ಮುಂದಿನ ಸಂಚಿಕೆಯಲ್ಲಿ .... .... . .

### ಸಪ್ತಗಿರಿ — ಮೇ 1983

**ರಾಮಾನುಜಾಚಾರ್ಯರು**
– ಎ ಎಸ್. ಪಂಕಜ

**ನರಸಿಂಹ ಸುಪ್ರಭಾತ**
– ಕವಿತಾಕೃಷ್ಣ

**ಹರಿದಾಸರು - ಸೇವಾಭಾವ**
– ಕಂಠೀರಾವ್ ಜಾಗೀರ್‌ದಾರ್

**ಆಳದಿಂದಾತ್ಮ ಮತಿ**
– ಮತ್ತೀಕೆರೆ ಅನಂತು

**ಶಂಕರಾಚಾರ್ಯರು**
– ಬಿ. ಎಸ್. ಸರೋಜ

**ವಿಜಯನಗರದ ಕಾಲದ ದ್ವೈತ ಗ್ರಂಥಗಳು**
– ಡಾ || ಎನ್. ಅನಂತರಂಗಾಚಾರ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

## 1983
## ಮೇ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 1 | ಭಾನುವಾರ | ಶ್ರೀ ವೇದನಾರಾಯಣಸ್ವಾಮಿ ಗರುಡೋತ್ಸವ. |
| 4 | ಬುಧವಾರ | ಶ್ರೀ ವೇದನಾರಾಯಣಸ್ವಾಮಿ ರಥೋತ್ಸವ. |
| 10 | ಮಂಗಳವಾರ | ತಿರುಪತಿ ಗಂಗಜಾತ್ರೆ ಆರಂಭ. |
| 18 | ಬುಧವಾರ | ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವಾರಂಭ. |
| 22 | ಭಾನುವಾರ | ಶ್ರೀ ಗೋವಿಂದರಾಜಸ್ವಾಮಿ ಗರುಡೋತ್ಸವ. |
| 24 | ಮಂಗಳವಾರ | ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸಾಮಿ ಬ್ರಹ್ಮೋತ್ಸವಾರಂಭ |
| 25 | ಬುಧವಾರ | ನೃಸಿಂಹ ಜಯಂತಿ. ಶ್ರೀ ಗೋವಿಂದರಾಜಸ್ವಾಮಿ ರಥೋತ್ಸವ. |
| 28 | ಶನಿವಾರ | ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಗರುಡೋತ್ಸವ |
| 31 | ಮಂಗಳವಾರ | ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ರಥೋತ್ಸವ. |

## ಹೊಸ ತಿ. ತಿ. ದೇ. ಆಯವ್ಯಯ ಪತ್ರದ ಅಂಗೀಕಾರ

ತಿ. ತಿ. ದೇ. ಆಡಳಿತ ನಿರ್ವಾಹಕ ಮಂಡಳಿ ಹಾಗೂ ತಿ. ತಿ. ದೇ. ಟ್ರಸ್ಟ್ ಬೋರ್ಡ್‌ಗಳು ಈಚೆಗೆ 1982–83 ರ ಪುನರ್ವಿಮರ್ಶಿತ ಆಯ ವ್ಯಯ ಪತ್ರ ಹಾಗೂ 1983–84 ರ ಅಂದಾಜು ಆಯವ್ಯಯ ಪತ್ರಗಳನ್ನು ಅಂಗೀಕರಿಸಿವೆ.

1982–83 ರಲ್ಲಿನ ಒಟ್ಟು ಆದಾಯ ಹಾಗೂ ವೆಚ್ಚಗಳು ಅನುಕ್ರಮವಾಗಿ ರೂ 33.65 ಕೋಟಿ ಹಾಗೂ ರೂ 28. 54 ಕೋಟಿ ಆಗಿದ್ದಿತು. ಮೊದಲಿಗೆ ಈ ಆಯವ್ಯಯವನ್ನು ರೂ 27.33 ಕೋಟಿ ಹಾಗೂ ರೂ 22.07 ಕೋಟಿ ಎಂದು ನಿರೀಕ್ಷಿಸಲಾಗಿದ್ದಿತು. ಈಗ 1983–84 ರಲ್ಲಿನ ಆದಾಯ ವ್ಯಯಗಳನ್ನು ಅನುಕ್ರಮವಾಗಿ ರೂ. 36.08 ಕೋಟಿ, ಹಾಗೂ ರೂ. 30.75 ಕೋಟಿ ಎಂದು ಅಂದಾಜು ಮಾಡಲಾಗಿದೆ. ಹೆಚ್ಚುವರಿ ಹಣವನ್ನು ಕಾಮನ್ ಗುಡ್ ಫಂಡ್, ರಿಸರ್ವ್‌ಫಂಡ್, ಪೆನ್‌ಷನ್ ಫಂಡ್ ಮೊದಲಾದವುಗಳಿಗಾಗಿ ವಿನಿಯೋಗಿಸಲಾಗುವುದು.

1982–83 ಹಾಗೂ 1983–84 ಗಳಲ್ಲಿ ಪ್ರತಿವರ್ಷ 2 ಕೋಟಿ ರೂಗಳನ್ನು ಶ್ರೀವೆಂಕಟೇಶ್ವರ ಸ್ವಾಮಿಯ ವಜ್ರ ಕಿರೀಟದ ನಿರ್ಮಾಣಕ್ಕಾಗಿ ವಜ್ರಗಳನ್ನು ಕೊಂಡು ಕೊಳ್ಳಲು ಎತ್ತಿಡಲಾಗಿದ್ದು, ಈ ವರ್ಷಗಳಲ್ಲಿ ಚಿನ್ನದ ಮಾರಾಟದಿಂದ 2.50 ಕೋಟಿ ರೂಗಳ ವಾರ್ಷಿಕ ಆದಾಯವನ್ನು ನಿರೀಕ್ಷಿಸಲಾಗಿದೆ. ಪುನರ್ವಿಮರ್ಶಿತ ಆಯವ್ಯಯ ಪಟ್ಟಿಯಲ್ಲಿ ಇಂಜನೀಯರಿಂಗ್ ವಿಭಾಗದಲ್ಲಿ ಈ ಮೊದಲು ಅಂದಾಜು ಮಾಡಲಾಗಿದ್ದ 1982–83 ರ ವೆಚ್ಚವನ್ನು 5.20 ಕೋಟಿ ರೂಗಳಿಂದ 7.56 ಕೋಟಿ ರೂಗಳಿಗೆ ಏರಿಸಿದ್ದು, 1983–84 ರಲ್ಲಿ 8.09 ಕೋಟಿರೂಗಳನ್ನು ಸತ್ರಗಳು, ಕ್ಯೂಕಾಂಪ್ಲೆಕ್ಸ್, ತಿರುಮಲೆಯ ಬೆಟ್ಟದ ಕಾಲು ಹಾದಿಯಲ್ಲಿನ ನೆರಳು – ಮೊದಲಾದ ಹಿರಿಯ ಕಾಮಗಾರಿ ಕೆಲಸಗಳಿಗಾಗಿ ವಿನಿಯೋಗಿಸಲಾಗುವುದು.

ಈ ವರ್ಷ ಹುಂಡಿಯ ಧನಸಂಚಯವು 850 ಲಕ್ಷರೂಗಳಿಂದ 970 ಲಕ್ಷ ರೂಗಳಿಗೂ, ಮುಂದಿನ ವರ್ಷ 1020 ಲಕ್ಷರೂಗಳಿಗೂ ಏರುವುದೆಂದು ನಿರೀಕ್ಷಿಸಲಾಗಿದೆ.

Edited and Published on behalf of the T. T. Devasthanams by K. Subba Rao, M. A., and Printed at
T. T. D. Press by M. Vijayakumar Reddy, Manager, T. T. D. Press, Tirupati - 517 501.




27-3-'83—T. T. D. INFORMATION CENTRE
AT AIRPORT–RENIGUNTA



SRI VENKATESWARA SWAMY FLOAT FESTIVAL
FROM 24-3-'83 TO 28-3-'83.

Regd No. H/TRP 14

ಬಿಡಿಪ್ರತಿ ಬೆಲೆ ರೂ 1-00



ಉಗಾದಿಯ
ಶುಭಾಶಯಗಳು

– ಸಂಪಾದಕ